ಶ್ರೀ

# ಮಹಾಪುರುಷ ಬಿಸ್ಟಪ್ಪಯ್ಯನವರು

## ಶ್ರೀ ವಿರೂಪಾಕ್ಷ ದೇವಾಲಯ ಗೋಪುರಕ್ಕೆ ಬಲಿದಾನ



ಲೇಖಕರು :

ದಿ. ಜಪಟಿ ಅನಂತರಾಯರು

( ಶಾಲಾ ಶಿಕ್ಷಕರು )





ಪ್ರಕಾಶಕರು :

ಶ್ರೀ ಬಿಸ್ಟಪ್ಪಯ್ಯ ಮಹಾಪುರುಷ

ಮೋವುಂಡಿ

-x-

ಬೆಲೆ : ಎರಡು ರೂಪಾಯಿ

ಮುದ್ರಕರು :

ಸಾ. ಅ. ಹೊಸಕೇರಿ

ವಿಜಯ ಮುದ್ರಾಲಯ,

ಧಾರವಾಡ

೧೯೬೩

ಮೊದಲ ಮುದ್ರಣ : ೧೦೦೦ ಪ್ರತಿ

ಬೆಲೆ : ರೂ. ೨=೦೦



ಪ್ರಕಾಶಕರು :

ಶ್ರೀ ಬಿಷ್ಟಪ್ಪಯ್ಯ ಮಹಾಪುರುಷ

ಮೋವುಂಡಿ

(ಪೋ. ಬೆಲವಗಿ ತಾ. ಹಾವೇರಿ)

# ಮುನ್ನುಡಿ

ಈ ಗ್ರಂಥವು ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಹೊರಟಿದೆ. ನಾನು ವಕೀಲಿ ಮಾಡುತ್ತಿರುವಾಗ, ಸುಮಾರು ೫೦ ವರ್ಷಗಳ ಹಿಂದೆ, ನನ್ನ ತುಸು ದೂರದ ಆಪ್ತರಾದ ಮಹಾಪುರುಷ ಬಂಧುಗಳು ತಮ್ಮದೊಂದು ಖಟ್ಲೆಯಲ್ಲಿ ನನಗೆ ವಕೀಲಿ ಕೊಟ್ಟಿದ್ದರು. ಆಗ, ಅವರ ಮನೆತನದ ಇತಿಹಾಸವನ್ನು ಕೇಳುವ ಪ್ರಸಂಗ ಬಂದಿತು. (ಈ ಮನೆತನದವರಿಗೆ ಮಹಾಪುರುಷರೆಂದು ಅಡ್ಡ ಹೆಸರು ಮತ್ತು ಮನೆತನದಲ್ಲಿ ಮೂರೇ ಹೆಸರುಗಳು. (೧) ಬಿಷ್ಟಪ್ಪಯ್ಯ, (೨) ಶಿವಪ್ಪಯ್ಯ, (೩) ಮಹಾದೇವಪ್ಪಯ್ಯ, ೧ನೇ ಬಿಷ್ಟಪ್ಪಯ್ಯ, ೨ನೇ ಬಿಷ್ಟಪ್ಪಯ್ಯ ಮುಂತಾಗಿ; ಅವರ ಮನೆತನದವರು ಹಿಂದಕ್ಕೆ ಹಂಪೆಯ ಮಹಾಗೋಪುರವನ್ನು ಕಟ್ಟಿಸಿದರೆಂದು ಕೇಳಿದ್ದೆ. ಆ ಸಂಬಂಧವಾಗಿ ಮನೆತನದಲ್ಲಿ ಏನಾದರೂ ಕಾಗದಪತ್ರಗಳು ಅವೆಯೋ ಏನೋ ಎಂದು ಕೇಳಿದೆ. ಅವರು ಅಂಥ ಕಾಗದಪತ್ರಗಳೇನೂ ತಮ್ಮಲ್ಲಿ ಇಲ್ಲವೆಂದೂ ಆದರೆ ಮನೆತನದಲ್ಲಿ ಪರಂಪರಾಗತ ಒಂದು ಸಾಂಪ್ರದಾಯ ವಿದೆಯೆಂದೂ ಅವರು ಹೇಳಿದರು. ಅದಾವುದೆಂದರೆ ಪ್ರತಿ ಹುಣ್ಣಿಮೆಯ ದಿನ, ೭೦-೮೦ ಮೈಲುಗಳ ದೂರದಲ್ಲಿರುವ ಹಂಪೆಯ ಗೋಪುರಕ್ಕೆ ಬಲಿದಾನ ಮಾಡಿದಳೆಂದು ಹೇಳಲಾಗುವ ಲಕ್ಷ್ಮ್ಯಂಬೆಯ ಹೆಸರಿನಲ್ಲಿ ನೈವೇದ್ಯ ಕೊಡುವ ಸಂಪ್ರದಾಯವು ಮಾತ್ರ ಇನ್ನೂರು ಮುನ್ನೂರು ವರ್ಷಗಳಿಂದ ಅವ್ಯಾಹತವಾಗಿ ನಡೆದಿದೆ ಎಂದು ಮಾತ್ರ ಹೇಳಿದರು. ನನಗೆ ತುಸು ಆಶ್ಚರ್ಯವಾಯಿತು. ಆದರೆ, ಕಾಗದಪತ್ರಗಳೇನೂ ಸಿಕ್ಕಿಲ್ಲವಾದ್ದರಿಂದ, ನಾನು ಸುಮ್ಮನೇ ಕೂಡ್ರಬೇಕಾಯಿತು. ಆದಕಾರಣ ಇಷ್ಟು ದಿವಸ ಸುಮ್ಮನೆ ಕುಳಿತಿದ್ದೆ. ಆದರೆ ಈಗ ಆ ಬಗ್ಗೆ ಬಲವಾದ ಆಧಾರ ದೊರೆತಿವೆ. ಅವೆಂದರೆ, ಮೂಲ ಬಿಷ್ಟಪ್ಪಯ್ಯನವರ ಸಂಸ್ಕೃತ ಚರಿತ್ರೆಯು ಮುಂತಾದವುಗಳು. ಆ ಸಂಸ್ಕೃತ ಚರಿತ್ರೆ ಮುಂತಾದ ಮೂಲ ಆಧಾರಗಳಿಂದ ಇದೀಗ ಈ ಗ್ರಂಥ ಮುದ್ರಿಸಿದೆ. ಆ ಗ್ರಂಥದ ಹಸ್ತಪ್ರತಿಯು ಕೆಲವು ದಿನಗಳ ಹಿಂದೆ ಹೊಸಪೇಟೆ ಶ್ರೀ ನಾರಾಯಣಭಟ್ಟ ನಾರಾಯಣದೇವರಕೆರೆ ಇವರಲ್ಲಿ ಸಿಕ್ಕಿತು.

ಆ ಪ್ರತಿಯನ್ನು ಶ್ರೀ ಅನಂತರಾವ ಆಪಟೆ ಎಂಬ ಆಳ್ನಿಯ ಶಾಲಾ ಮಾಸ್ತರರು ದೊರಕಿಸಿರುವರು. ಅವರ ಆಧಾರದಿಂದ ಅವರು ಈ ಗ್ರಂಥವನ್ನು ಬರೆದು ತೆಗೆದಿರುವರು. ಶ್ರೀ ಆಪಟೆ ಮಾಸ್ತರರು ವಸ್ತುತಃ ಬಡವರು. ಆದರೆ ಬಿಷ್ಟಪ್ಪಯ್ಯನವರ ಮನೆತನದ ನಿಸ್ಸೀಮ ಭಕ್ತರು. ಸಾತ್ವಿಕರು ಧಾರ್ಮಿಕರು. ಅವರು ಈ ಗ್ರಂಥವನ್ನು ದೊರೆಕಿಸುವದಕ್ಕಾಗಿಯೂ ಅದನ್ನು ಭಾಷಾಂತರಿಸಿ ಬರೆಯುವವಕ್ಕಾಗಿಯೂ ಅತ್ಯಂತ ಪರಿಶ್ರಮಪಟ್ಟಿದ್ದಾರೆ. ದುರ್ದೈವದಿಂದ ಅವರು ಕೆಲ ದಿನಗಳ ಹಿಂದೆ ತೀರಿಕೊಂಡರು. ನಿಜವಾಗಿ, ಈ ಗ್ರಂಥ ಹೊರಟಿದ್ದರ ಶ್ರೇಯಸ್ಸೆಲ್ಲವೂ ಅವರಿಗೆ

ಈ ಬಿಷ್ಟಪ್ಪಯ್ಯನವರ ಚರಿತ್ರೆಯಲ್ಲಿ ಬಂದಿರುವ ಅನೇಕ ಪವಾಡಗಳನ್ನು ನಂಬಿರಿ, ಬಿಡಿರಿ. ಆದರೆ ಲಕ್ಷ್ಮ್ಯಂಬೆಯವರ ಬಲಿದಾನ ಮಾತ್ರ ಪವಾಡವಲ್ಲ. ೪೦–೫೦ ವರ್ಷಗಳ ಹಿಂದೆಯೇ ನಾನು ಹಂಪೆಯನ್ನು ನೋಡಲಿಕ್ಕೆ ಹೋದಾಗ, ಇದು ಬಿಷ್ಟಪ್ಪಯ್ಯನವರ ಗೋಪುರವೆಂಬುದನ್ನು ಕೇಳಿವೆ. ಅಲ್ಲಿಯ ೩ನೆಯ ಅಂತಸ್ತಿನಲ್ಲಿರುವ ಲಕ್ಷ್ಮ್ಯಂಬೆಯ ಶಿಲಾಮೂರ್ತಿಯನ್ನು ನೋಡಿದ್ದೆ. (ಆ ಶಿಲಾಮೂರ್ತಿಗೆ ಅನೇಕ ವರ್ಷಗಳಿಂದ ಸುಣ್ಣವನ್ನು ಬಳೆಯುತ್ತ ಬಂದಿದ್ದಾರೆ. ಆದ್ದರಿಂದ ಇಲ್ಲಿ ಕೊಟ್ಟಿರುವ ಅವರ ಫೋಟೋ ಚೆನ್ನಾಗಿ ಹೊರಟಿಲ್ಲ) ಅಲ್ಲದೆ, ಬಿಷ್ಟಪ್ಪಯ್ಯನವರ ಶಿಲಾಮೂರ್ತಿ (ಫೋಟೊ), ಅವರಿಗೆ ದೊರೆತ ರಸಲಿಂಗದ ಮೂರ್ತಿ (ಫೋಟೋ) ಇವೆಲ್ಲವು ಬಿಷ್ಟಪ್ಪಯ್ಯನವರ ಚರಿತ್ರೆ ನಿಜವೆಂದೇ ಹೇಳುತ್ತವೆ

ಬಿಷ್ಟಪ್ಪಯ್ಯನವರ ಕಾಲವು ೧೬೦೦ ಸುಮಾರು ಇರಬಹುದು. ಏಕೆಂದರೆ, ಇವರ ಚರಿತ್ರೆಯಲ್ಲಿ ಮಾಧ್ವಮತದ ಶ್ರೀ ಸತ್ಯಬೋಧಸ್ವಾಮಿಗಳವರ ಉಲ್ಲೇಖ ದೊರೆಯುತ್ತದೆ. (ಪುಟ ೬೨)

ಈ ಗ್ರಂಥವನ್ನು ಮುದ್ರಿಸಿರುವದಕ್ಕಾಗಿ ಶ್ರೀ ಬಿಷ್ಟಪ್ಪಯ್ಯ ಮಹಾಪುರುಷ ಮೇವುಂಡಿ ಇವರನ್ನು ನೆನೆಸುವದು ಅಗತ್ಯ.

ಸಾಧನಕೇರಿ
೨[illegible]-೧೧-೧೯೬೨

**ವೆಂಕಟರಾವ ಆಲೂರ**

|| ಶ್ರೀ ಸಿದ್ಧಿ ವಿನಾಯಕ ಪ್ರಸನ್ನ ||

# ನಿವೇದನೆ

ದಕ್ಷಿಣ ಕಾಶೀಕ್ಷೇತ್ರ ವೇಣುಪುರಿ (ಬಿದಿರಹಳ್ಳಿ)ಯ ಕ ಗಂ. ಶಾಲೆಗೆ ನಾನು ವರ್ಗಾಯಿಸಲ್ಪಟ್ಟೆನು. ಅದು ಸನ್ನ ೧೯೫೪ನೇ ಇಸ್ವಿ ಕಾಲವಾಗಿತ್ತು. ವೇಣುಪುರಿಯು ಪುರಾಣ ಪ್ರಸಿದ್ಧ ಕ್ಷೇತ್ರಸ್ಥಾನವು. ಆದರೆ ಈ ಮಾತು ಕೇವಲ ಕರ್ಣೋಪಕರ್ಣದ್ವಾಗಿಯೇ ಉಳಿದಿರುವದಲ್ಲದೇ ಅಧಿಕೃತವಾಗಿ ಪ್ರಕಾಶಿತವಾಗಿರಲಿಲ್ಲ. ಅದರಂತೆಯೇ ಅದರ ಸಮೀಪದಲ್ಲಿ ಇರುವ ವಿಠ್ಠಲ ಪುರ, ರಂಗಾಪುರಗಳು ಸಹ ಪವಿತ್ರ ಕ್ಷೇತ್ರ ಸ್ಥಾನಗಳೆಂದು ಹೆಸರುಪಡೆದಿವೆ. ಪಂಪಾಕ್ಷೇತ್ರವನ್ನು ಪಾವನಗೊಳಿಸಿದ ಶ್ರೀಮದಾದ್ಯ ಬಿಷ್ಟಪ್ಪಯ್ಯನವರು ವಾಸ, ತಪ, ಧ್ಯಾನ, ಅನುಷ್ಠಾನಗಳನ್ನು ಮಾಡಿದ ಪುಣ್ಯ ಕ್ಷೇತ್ರಗಳು ಇವು. ಶ್ರೀ ಕೈಲಾಸನಾಥನು ತನ್ನ ಗಣಸಮೂಹದೊಂದಿಗೆ ಶ್ರೀ ಕೈಲಾಸದಲ್ಲಿ ವಿರಾಜಿಸುತ್ತಿರುವಂತೆ ಶ್ರೀ ವಿರುಪಾಕ್ಷೇಶ್ವರನ ಪೂರ್ಣಾಂಶದಿಂದ ಅವತರಿಸಿದ ಶ್ರೀ ಬಿಷ್ಟಪ್ಪಯ್ಯನವರು ತಮ್ಮ ಭಕ್ತಗಣಗಳೊಂದಿಗೆ ವಿರಾಜಿಸಿ ಪಾವನ ಗೊಳಿಸಿದ ಪುಣ್ಯಕರ ಸ್ಥಾನಗಳು, ಆದರೆ ಸೃಷ್ಟಿಯ ಎಲ್ಲ ಚರಾಚರ ವಸ್ತುಗಳು ಕಾಲಚಕ್ರದ ಹೊಡೆತಕ್ಕೆ ಶಿಲುಕದೇ ಇರುವಂತಿಲ್ಲ. ಎಂದು ಪ್ರಕೃತಿಯ ನಿಯಮವಿದ್ದಂತೆ ತೋರುತ್ತದೆ. ಅಂತೆಯೇ ಅತ್ತ ಪಂಪಾಕ್ಷೇತ್ರವು ಹಾಳು ಹಂಪಿ ಆಯಿತು. ಇತ್ತ ವಿಠಲ-ರಂಗಾಪುರಗಳು ಹಾಳ ಹೇಗುಲಗಳ ಬೀಡಾದವು. ಆದರೆ ಪಂಪಾಕ್ಷೇತ್ರ ಹಾಳು ಹಂಪಿಯಾದರೂ ಅದರ ಐತಿಹ್ಯ, ಪುರಾಣ, ಮಹಾತ್ಮ್ಯ ಮತ್ತು ಪಾವಿತ್ರ್ಯತೆಗಳು ಪ್ರಕಾಶಿತವಾಗಿ ಕೀರ್ತಿಶೇಷ ವಾಗಿ ಉಳಿದಿರುವಂತೆ ಈ ವಿಠಲಾಪುರ, ರಂಗಾಪುರಗಳ ಐತಿಹ್ಯ, ಮಹಾತ್ಮ್ಯಗಳೂ ಅದೇಕೆ ಪ್ರಕಾಶಿತವಾಗಬಾರದಿತ್ತು ? ಎಂದು ಮನಸ್ಸಿಗೆ ಬಹಳ ವ್ಯಾಕುಲವೆನಿಸಿತು. ಆ ವ್ಯಾಕುಲವು ನನ್ನನ್ನು ಸುಮ್ಮನೆ ಕೂಡ್ರ ಗೊಡಲಿಲ್ಲ. ಆ ದಿಶೆಯಲ್ಲಿ ಪ್ರಯತ್ನ ಮಾಡಬೇಕೆಂಬ ಹಂಬಲವು ಬೆಳೆಯ ಹತ್ತಿತು. ಅದರಂತೆ ಪ್ರಯತ್ನ ಮಾಡಿದೆನು. ಆದರೆ ಆ ಕಾಲವು ಅನುಕೂಲ ವಿರಲಿಲ್ಲ. ಕರ್ಣೋಪಕರಣಗಳಿಂದ ಬೆಳೆದುಬಂದ ಸಂಗತಿಗಳನ್ನು ಸಂಗ್ರಹಿ ಸಿದೆನಾದರೂ ಗ್ರಂಥಲೇಖನಕ್ಕೆ ಹೊಂದಿಕೊಳ್ಳುವಂತಾಗಲಿಲ್ಲ. ಅಲ್ಲದೆ

ಪ್ರತಿಕೂಲ ಕಾಲದ ಫಲವಾಗಿ ಆ ಕಾರ್ಯವು ಅಲ್ಲಿಗೇ ಸ್ಥಗಿತವಾಯಿತು. ಆ ನಂತರ ಹದಿನೈದು ವರ್ಷಗಳ ಕಾಲಾವಧಿ ದಾಟಿದ ನಂತರ ಈಗ ನನ್ನ ಕಾರ್ಯಕ್ಕೆ ಪುನಃ ಚಾಲನೆ ದೊರೆಯಿತು. ಮೋವುಂಡಿ ಇನಾಮುದಾರ ಇವರು ನನ್ನ ಕಾರ್ಯಕ್ಕೆ ಪ್ರೋತ್ಸಾಹನೆ ಕೊಟ್ಟು ಬಹು ಪರಿಶ್ರಮದಿಂದ ಅಧಿಕೃತವಾಗಿ ಬರೆದಿಟ್ಟ ತಮ್ಮ ಪೂರ್ವಜರ ಮಹಾತ್ಮ್ಯವನ್ನು ಒದಗಿಸಿ ಕೊಟ್ಟರು.

ಶ್ರೀಮದಾದ್ಯ ಬಿಷ್ಟಪ್ಪಯ್ಯನವರ ಚರಿತ್ರರೂಪ ಪುರಾಣವು ಸಂಸ್ಕೃತ ಭಾಷೆಯಲ್ಲಿ ಅನುಷ್ಟುಪ ವೃತ್ತದಲ್ಲಿ ಶ್ಲೋಕವುಳ್ಳದ್ದು ಇತ್ತೆಂದೂ ಅದು ಅವರ ಮನೆತನದಲ್ಲಿ ಪುರಾಯಣ ಗ್ರಂಥವೆಂದು ಗಣಿಸಲ್ಪಟ್ಟಿತೆಂದೂ ಹಿರಿಯರು ಹೇಳುತ್ತಾರೆ. ಆದರೆ ಅದು ಎಲ್ಲಿ ಹೇಗೆ ಮಾಯವಾಯಿತೋ ತಿಳಿಯದು. ಅದನ್ನು ದೊರಕಿಸುವದಕ್ಕಾಗಿ, ಬಹಳವಾಗಿ, ಪ್ರಯತ್ನ ಮಾಡಿದರೂ ಸಾಧ್ಯವಾಗಲಿಲ್ಲ. ಯಾರೋ ಒಬ್ಬ ಭಕ್ತರು ಪುರಾಣದ ನಕಲನ್ನು ಕೇವಲ ಎರಡು ಸರ್ಗಪೂರ್ಣ ಮತ್ತು ಮೂರನೇ ಸರ್ಗದಲ್ಲಿ ೩೩ ಶ್ಲೋಕಗಳನ್ನು ಮಾತ್ರ ಮಾಡಿಕೊಂಡದ್ದು ಹೊಸಪೇಟೆಯಲ್ಲಿ ವೇದಮೂರ್ತಿ ನಾರಾಯಣಭಟ್ಟ ನಾರಾಯಣದೇವರಕೆರೆ ಇವರಲ್ಲಿ ಇರುವದೆಂದು ಅಕಸ್ಮಾತ್ ಗೊತ್ತಾಯಿತು. ಅದನ್ನೇ ಮೋವುಂಡಿ ಇನಾಮದಾರ ಶ್ರೀ ಬಿಷ್ಟಪ್ಪಯ್ಯನವರು ದೊರಕಿಸಿ ಕೊಟ್ಟರು. ಅದನ್ನು ನಾನು ಈ ಚರಿತ್ರ ಲೇಖನಕ್ಕೆ ಆಧಾರವಾಗಿ ಇಟ್ಟು ಕೊಂಡಿದ್ದೇನೆ. ಈ ನಕಲು ಸಂಸ್ಕೃತ ಭಾಷೆಯಲ್ಲಿ ಇದ್ದದನ್ನು ಗಜೇಂದ್ರ ಗಡದ ಎಸ್. ಬಿ. ಕಾರಕೂನ ಎಂಬ ಸಂಸ್ಕೃತ ಪ್ರಾಧ್ಯಾಪಕರು ಇದ್ದಕ್ಕಿದ್ದಂತೆ ಕನ್ನಡದಲ್ಲಿ ಭಾಷಾಂತರಿಸಿ ಕೊಟ್ಟರು. ಮತ್ತು ಹರಿಹರದಲ್ಲಿಯ ಸಂಸ್ಕೃತ ಪಂಡಿತರಾದ ವೇ ಮೂರ್ತಿ ಯಜ್ಞೇಶ್ವರ ದೀಕ್ಷಿತ ಇವರು ನಕಲಿನಲ್ಲಿಯ ಶ್ಲೋಕಗಳಲ್ಲಿದ್ದ ತಪ್ಪು ದೋಷಗಳನ್ನು ಸರಿಪಡಿಸಿಕೊಟ್ಟರು ಈ ಎಲ್ಲ ಮಹನೀಯರು ಮಾಡಿದ ಸಹಾಯವೇ ಗ್ರಂಥರೂಪತಾಳಿದೆ ವಿನಾ ಇದರಲ್ಲಿ ಗ್ರಂಥ ಲೇಖಕನ ಹಿರಿಮೆ ಏನೂ ಇರುವದಿಲ್ಲ, ಕೇವಲ ನಿಮಿತ್ತ ಮಾತ್ರನು.

ಈ ಪುಸ್ತಕವು ಕೇವಲ ಓರ್ವ ಮಹಾ ಮಹಿಮರಾದ ಸತ್ಪುರುಷರ ಚರಿತ್ರಾಗಿದ್ದರೂ ಜನರಲ್ಲಿ ಹಿಂದೂ ಧರ್ಮ, ಸಂಸ್ಕೃತಿಗಳ ಬಗೆಗೆ ಆಸ್ಥೆ

ಬೆಳೆಯಿಸುವದೆ ಅವರ ಅವತಾರ ಕಾರ್ಯವಾಗಿದ್ದರಿಂದ ಆ ಕಾರ್ಯವು ಈ ಗ್ರಂಥವಾಚನದಿಂದ ಕೆಲಮಟ್ಟಿಗಾದರೂ ಮುಂದುವರಿಯಬೇಕೆಂತಲೂ ಜನತೆಯಲ್ಲಿ ಹಿಂದೂ ಧರ್ಮ ಸಂಸ್ಕೃತಿಗಳ ಬಗ್ಗೆ ಸ್ವಾಭಿಮಾನವು ಬೆಳೆಯಲೆಂದೂ ಉದ್ದೇಶವನ್ನು ಇಟ್ಟುಕೊಂಡು ಈ ಪುಸ್ತಕಕ್ಕೆ ಆರಂಭದಲ್ಲಿ "ವಿಷಯ ಪ್ರವೇಶ" ಎಂಬ ಹಿಂದುತ್ವದ ಮಹತಿಯ ವಿಷಯದ ಒಂದು ಪ್ರಕರಣವನ್ನು ಜೋಡಿಸಿದ್ದೇನೆ. ಅದರಿಂದ ಓದುಗರಲ್ಲಿ ಧರ್ಮಭಾವನೆ ಬೆಳೆದರೆ ನನ್ನ ಈ ಸೇವೆ ಸಫಲವಾಯಿತೆಂದು ತಿಳಿಯುತ್ತೇನೆ.

ಚರಿತ್ರೆಯು ಎಲ್ಲ ಅಭಿರುಚಿಯ ಜನರಿಗೂ ಉಪಯುಕ್ತವಾಗಬೇಕೆಂದು ನನಗೆ ಆಧಾರವಾಗಿ ಸಿಕ್ಕ ಸಂಸ್ಕೃತ ಶ್ಲೋಕಗಳನ್ನು ಕನ್ನಡದ ಲಿಪಿಯಲ್ಲಿ ಇದ್ದಕ್ಕಿದ್ದಂತೆ ಬರೆದದ್ದು ಎರಡನೇ ಪ್ರಕರಣವಾಗಿಯೂ ಆ ಸಂಸ್ಕೃತ ಶ್ಲೋಕಗಳಲ್ಲಿ ಬೇರೆಬೇರೆ ವಿಷಯಗಳ ಭಾಗಗಳನ್ನು ಬರೆದು ಆಯಾ ಭಾಗಗಳ ಕೆಳಗೆ ಆ ಶ್ಲೋಕಗಳ ಅನುವಾದವನ್ನು ಎರಡನೆಯ ಪ್ರಕರಣವಾಗಿಯೂ ಕೇವಲ ಕಥೆಯ ರೂಪದಲ್ಲಿ ಅವರ ಚರಿತ್ರೆಯನ್ನು ನಾಲ್ಕನೇ ಪ್ರಕರಣವಾಗಿಯೂ ನಿತ್ಯವೂ ಅವರ ಚರಿತ್ರದ ಸಾರಾಂಶವು ಸ್ಮರಣದಲ್ಲಿ ಉಳಿಯಲೆಂಬ ಉದ್ದೇಶದಿಂದ ಪದ್ಯರೂಪ ಚರಿತ್ರೆಯನ್ನು ಐದನೇ ಪ್ರಕರಣವಾಗಿಯೂ ಈ ಚರಿತ್ರೆಯಲ್ಲಿಯ ಘಟನೆಗಳ ವಿಷಯಕ್ಕೆ ಉಂಟಾಗುವ ಸಂಶಯಗಳಿಗೆ ಉತ್ತರ ರೂಪದಲ್ಲಿ "ವಿಚಾರ ಸಂಕಲನ" ಎಂಬ ಆರನೇ ಪ್ರಕರಣವನ್ನೂ ಕೊನೆಗೆ ಪರಿಶಿಷ್ಟಗಳಲ್ಲಿ ಬೇರೆ ಬೇರೆಯವರು ಮಾಡಿದ ಸ್ತೋತ್ರಗಳನ್ನೂ ಮಂಗಲಾರತಿಯನ್ನೂ ಬರೆದು ಗ್ರಂಥವನ್ನು ಪೂರ್ತಿಗೊಳಿಸಲಾಗಿದೆ.

**ಅಪಟೆ ಅನಂತರಾಯ**
ಲೇಖಕ

—

*

# ಪ್ರಕಾಶಕರ ಮಾತು

ಶ್ರೀ ಬಿಷ್ಟೇಶ ಚರಿತ್ರ (ವಿರೂಪಾಕ್ಷ ದೇವಾಲಯದ ಗೋಪುರಕ್ಕೆ ಬಲಿದಾನ) ಈ ವಿಷಯದ ಗ್ರಂಥವನ್ನು ಇದೀಗ ಪ್ರಕಟಿಸಲು ನಮಗೆ ಬಹಳ ಸಂತೋಷವಾಗುತ್ತದೆ. ಈ ಚರಿತ್ರೆಯು ಬರಿ ಒಂದು ವ್ಯಕ್ತಿಯ ಚರಿತ್ರೆಯಾಗಿ ಇರದೇ, ಕನ್ನಡ ನಾಡಿನ ಶಕ್ತಿಯೂ ಒಂದು ದೃಷ್ಟಿಯಿಂದ ಇರುವುದೆಂಬುದನ್ನು ಧಾರಾಳವಾಗಿ ತೋರಿಸಿ ಕೊಡುತ್ತದೆ ಕನ್ನಡನಾಡು ಇಂಥ ಎಷ್ಟೋ ಆದರ್ಶ ಮಹಾಪುರುಷರಿಂದ ಒಡಗೂಡಿ ಬೆಳಗಿದೆ.

ಈ ಗ್ರಂಥವು ಈ ಮೊದಲೇ ಪ್ರಕಟವಾಗುವುದು ಸಾಧ್ಯವಾಗಲಿಲ್ಲ. ಬಾಯಿಮಾತ್ರದಿಂದ ಈ ಮಹಾ ಪುರುಷರ ಜೀವನ ಚರಿತ್ರೆ ಕೇಳಿದ್ದೆವು. ಆದರೆ ಗ್ರಂಥರೂಪದಲ್ಲಿ ಇದು ನಮಗೆ ಲಭ್ಯವಾಗಿರಲಿಲ್ಲ. ನಾರಾಯಣ ದೇವರ ಕೆರೆಯ ಶ್ರೀ ನಾರಾಯಣಭಟ್ಟ ಅವರು ಇದರ ಮೂಲ ಪ್ರತಿಯನ್ನು ಒದಗಿಸಿಕೊಟ್ಟರು. ಅದು ಸಂಸ್ಕೃತದಲ್ಲಿ ಇದ್ದಿತು. ಅದನ್ನು ಕಂಡು ನಮಗೆ ತುಂಬಾ ಸಂತೋಷವಾಯಿತು

ಅದನ್ನು ಕನ್ನಡದಲ್ಲಿ ಬರೆಯಿಸಬೇಕೆಂಬ ಇಚ್ಛೆಯಾಯಿತು. ಗುರುಗಳೂ, ಹಿರಿಯರೂ ಆದ ದಿವಂಗತ ಅನಂತರಾವ ಆಪ್ಟೆ ಮಾಸ್ತರರು ಬಹಳ ಪರಿಶ್ರಮಪಟ್ಟು ಈ ಗ್ರಂಥ ರಚನೆ ಕೈಕೊಂಡು ನಮಗೆ ಬಹಳೇ ಉಪಕಾರ ಮಾಡಿದ್ದಾರೆ. ಕನ್ನಡದಲ್ಲಿ ಆದರ ಕೈಬರಹ ಪ್ರತಿ ತಯಾರಿಸಿ ಮುದ್ರಿಸಲು ಕೊಟ್ಟು ಆದರ ಬಗ್ಗೆ ನಿಷ್ಕಾಮ ಮನೋವೃತ್ತಿಯಿಂದ ಸುಮ್ಮನೆ ಕೂತರು. ಆದರೆ ಆದರ ಪ್ರತಿಗಳು ಹೊರಬರುವ ಮೊದಲೇ ಅವರು ನಮ್ಮನ್ನಗಲಿ ಹೋದರು. ಅವರು ಇರುವಾಗಲೇ ಅವರಿಗೆ ಈ ಗ್ರಂಥ ಪ್ರಕಟಮಾಡುವದಾಗಿ ತಿಳಿಸಿದ್ದೆವು ಮತ್ತು ತಮ್ಮ ಒಂದು ಫೋಟೊ ಪ್ರತಿ ಕಳಿಸಲು ಕೇಳಿಕೊಂಡಿದ್ದೆವು. ಆದರೆ ಅವರು ಎಷ್ಟುಮಾತ್ರಕ್ಕೂ ಒಪ್ಪದೆ ಹೋದರು. ಅವರ ಈ ಮನೋವೃತ್ತಿಯನ್ನು ಏನೆಂದು ಕರೆಯಬೇಕು ? ಕಡೆಗೂ ನಮ್ಮ ದುರ್ದೈವದಿಂದ ಅವರ ಫೋಟೋ ಸಿಗಲಿಲ್ಲ. ಅವರ ವಿಶಾಲ ಭಾವನೆಯ ಉಪಕಾರವನ್ನು ನೆನೆಸುವುದೇ ಅವರ ಭಾವಚಿತ್ರವಾಗಿದೆ.

ಕರ್ನಾಟಕ ಕುಲಪುರೋಹಿತರಾದ ಶ್ರೀ. ಆಲೂರ ವೆಂಕಟರಾಯರು ಸಂಶೋಧನೆಯ ದೃಷ್ಟಿಯಿಂದ ಶ್ರೀ ಬಿಷ್ಟೇರ ಚರಿತ್ರವನ್ನು ಮೇಲಿಂದ ಮೇಲೆ ಕೇಳುತ್ತಿದ್ದರು. ಅವರಿಗೆ ನಾವು ಈ ಹಸ್ತಪ್ರತಿಯನ್ನು ತೋರಿಸಿದಾಗ, ಅವರು ಅತ್ಯಾನಂದಬಟ್ಟರು; ಅಲ್ಲದೆ ಈ ಪುಸ್ತಕ ಪ್ರಕಟವಾಗುವಂತೆ ಪ್ರೋತ್ಸಾಹನೆಯನ್ನು ನೀಡಿದರು. ಅವರ ಆಶೀರ್ವಾದದ ಬಲದಿಂದಲೇ, ಈ ಪುಸ್ತಕ ಬೇಗನೇ ಬೆಳಕು ಕಾಣುವಂತಾಯಿತು. ಅವರು ಸ್ವಸಂತೋಷದಿಂದ ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದುಕೊಟ್ಟಿರುವರು. ಅದಕ್ಕಾಗಿ ನಾವು ಅವರಿಗೆ ತುಂಬಾ ಋಣಿಯಾಗಿದ್ದೇವೆ.

ಶ್ರೀ ವೆಂಕಟರಾಯರಂತೆಯೇ ಅವರ ಮಕ್ಕಳಾದ ಶ್ರೀ ಕೃಷ್ಣರಾಯರು ನಮಗೆ ಬಹಳ ನೆರವಾಗಿದ್ದಾರೆ. ಪುಸ್ತಕದಲ್ಲಿ ಬಂದಿರುವ ಎಲ್ಲ ಚಿತ್ರಗಳು ಪ್ರಕಾಶವಾಗುವಂತೆ ಅನೇಕ ರೀತಿಯಿಂದ ಸಹಾಯಮಾಡಿದ್ದಾರೆ. ಶ್ರೀನಿವಾಸ ಕಂಪನಿಯ ಶ್ರೀ ಕೃಷ್ಣ ಪೋತದಾರ ಅವರು ಸ್ವತಃ ಓಡಾಡಿ, ಭಾವಚಿತ್ರಗಳ ಬ್ಲಾಕು ತೆಗೆದು ಮಾಡಿಕೊಟ್ಟು ಅವು ಚೆಂದವಾಗಿ ಅಚ್ಚಾಗುವಂತೆ ನೆರವಾಗಿದ್ದಾರೆ.

ಮೇಲೆ ಕಾಣಿಸಿದ ಎಲ್ಲ ಮಹನೀಯರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ. ಅವರ ಉಪಕಾರವನ್ನು ಸ್ಮರಿಸಿದಷ್ಟು ಕಡಿಮೆಯೇ.

ನಮಗೆ ದೊರೆತ ಮಾಹಿತಿಯಿಂದ ಶ್ರೀ ಗುರುಗಳ ಚರಿತ್ರೆ ಇಷ್ಟು ಪ್ರಕಟವಾಗಿದೆ. ಮತ್ತೆ ಹೆಚ್ಚಿಗೆ ಮಾಹಿತಿಯು ಯಾವ ಮಹನೀಯರ ಹತ್ತಿರ ಇದ್ದರೆ, ಈ ವಿಷಯಕ್ಕೆ ಸಂಬಂಧಿಸಿದ ಯಾವುದೇ ಗ್ರಂಥ ಸಿಕ್ಕರೆ, ಕೆಳಗಿನ ವಿಳಾಸಕ್ಕೆ ದಯವಿಟ್ಟು ಕಳಿಸಬೇಕಾಗಿ ಬಿನ್ನಹ. ಅಂದರೆ ನಮಗೆ ಇದಕ್ಕೂ ಹೆಚ್ಚಿಗೆ ಗುರುಸೇವೆ ಮಾಡಲು ಅನುಕೂಲವಾಗುತ್ತದೆ. ಕೊನೆಗೆ ಈ ಗ್ರಂಥವನ್ನು ಪರಿಶ್ರಮಪಟ್ಟು ಮುದ್ರಿಸಿಕೊಟ್ಟ ವಿಜಯ ಮುದ್ರಾಲಯದ ಒಡೆಯರಾದ ಶ್ರೀ. ನಾ. ಅ. ಹೊಸಕೇರಿ ಅವರಿಗೂ ರಕ್ಷಾಕವಚ ಮುದ್ರಿಸಿದ ರವೀಂದ್ರ ಪ್ರೆಸ್‌ದವರಿಗೂ ನಮ್ಮ ಕೃತಜ್ಞತೆಗಳು.

ಮೇವುಂಡಿ, ಪೋ. ಬೆಳವಗಿ

೨೮-೧೧-೧೯೬೨

**ಬಿ. ಎಂ. ಮಹಾಪುರುಷ**

ಪ್ರಕಾಶಕರು

# ಚಿತ್ರ ಪರಿಚಯ

೧. **ಶ್ರೀ ಮದಾದ್ಯ ಬಿಷ್ಟಪ್ಪಯ್ಯನವರು**

ಮೂಲಪುರುಷ ಶ್ರೀ ಬಿಷ್ಟಪ್ಪಯ್ಯನವರ ಶಿಲಾಪ್ರತಿಮೆ. ಇಂದು ವಿಠಲಾಪುರದಲ್ಲಿ ಇದೆ.

೨. **ರಸಲಿಂಗ**

ಪರಮಾತ್ಮನಿಂದ ದೊರೆತದ್ದೆಂದು ಹೇಳಲಾದ ಮತ್ತು ಇಂದೂ ಮಹಾಪುರುಷರ ಮನೆತನದಲ್ಲಿ ಪೂಜಿಸಲ್ಪಡುವ ಭಾರವಾದ ಮಹಾಲಿಂಗ

೩. **ಗೋಪುರದಮ್ಮ — ಲಕ್ಷ್ಮಮ್ಮಂಬೆ**

ಬಲಿದಾನ ಮಾಡಿದ ಲಕ್ಷ್ಮಮ್ಮಂಬೆಯ ಶಿಲಾಮೂರ್ತಿ. ಹಂಪೆ ವಿರುಪಾಕ್ಷ ದೇವಾಲಯದ ಮಹಾದ್ವಾರ ಗೋಪುರದ ಎರಡನೆಯ ಅಂತಸ್ತಿನಲ್ಲಿದೆ.

೪. **ಗೋಪುರ**

ಶ್ರೀ ಮದಾದ್ಯ ಬಿಷ್ಟಪ್ಪಯ್ಯನವರು ಕಟ್ಟಿಸಿದ ಮತ್ತು ಲಕ್ಷ್ಮಮ್ಮಂಬೆಯವರು ಆಹುತಿಗೊಂಡ ಶ್ರೀ ಹಂಪೆ ವಿರುಪಾಕ್ಷ ದೇವಾಲಯದ ಮಹಾದ್ವಾರದ ಗೋಪುರ.

---

# ಪರಿವಿಡಿ



— — —



ಮೂಲ ಪುರುಷ ಶ್ರೀಮದಾದ್ಯ ಬಿಷ್ಟಪ್ಪಯ್ಯನವರು

# ಪ್ರಕರಣ ೧

# ವಿಷಯ ಪ್ರವೇಶ

**ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥**

(ಭ. ಗೀ. ೪. ೭)

ಅರ್ಥ:- "ಅರ್ಜುನನೇ ! ಯಾವ ಯಾವ ಕಾಲಕ್ಕೆ ಧರ್ಮಕ್ಕೆ ಗ್ಲಾನಿ (ಅವನತಿ) ಉಂಟಾಗುವದೊ ! ಅಧರ್ಮದ ಪ್ರಾಬಲ್ಯ ಹೆಚ್ಚಾಗುವದೋ ಆಯಾ ಕಾಲಕ್ಕೆ ನಾನು ಭೂಮಿಯ ಮೇಲೆ ಅವತರಿಸುತ್ತೇನೆ"

ಹಿಂದೂ ಧರ್ಮವು ಲಯವಾಗದಂತೆ ನೋಡಿಕೊಳ್ಳಲು ತಾನು ಸದಾವಕಾಲ ದಕ್ಷನಾಗಿರುತ್ತೇನೆಂದು, ಭಗವಂತನು ಅರ್ಜುನನಿಗೆ ಮೇಲಿನ ಶ್ಲೋಕದಲ್ಲಿ ವಚನವನ್ನೇ ಕೊಟ್ಟಂತಾಗಿದೆ. ಭಗವಂತನಿಗೂ ಕೂಡ ಹಿಂದೂ ಧರ್ಮವು ಅತ್ಯಂತ ಪ್ರೀಯವಾದದ್ದಾಗಿದೆ. ಇದಕ್ಕೆ ಕಾರಣ ಇಲ್ಲದಿರಲಿಲ್ಲ. ತಾನು ನಿರ್ಮಿಸಿದ ಜಗತ್ತು ಸುಸ್ಥಿತಿಯಲ್ಲಿ ಮತ್ತು ಸುಗಮವಾಗಿ ನಾಗ ಬೇಕೆಂದು ಆತನು ಬಯಸುವದು ಸಹಜವಲ್ಲವೇ ? ಅದು ಹಾಗೆ ನಾಗ ಬೇಕಾದರೆ ಸಮಾಜರಚನೆಯ ರೀತಿ, ನೀತಿಗಳು ಅದಕ್ಕೆ ಪೋಷಕವಾಗಿ ಇರ ಬೇಕಾಗುವವು. ಅಂಥ ರೀತಿ ನೀತಿಗಳು ನಮ್ಮ ಹಿಂದೂ ಧರ್ಮದಲ್ಲಿ ಅಲ್ಲದೆ ಬೇರಾವ ಧರ್ಮಗಳಲ್ಲಿಯೂ ಹೆಚ್ಚಾಗಿ ದೊರೆಯಲಾರವು. ಚತುರ್ವರ್ಣ, ಚತುರಾಶ್ರಮ ಮತ್ತು ಷೋಡಶ ಸಂಸ್ಕಾರ, ಈ ಪದ್ಧತಿಯ ತಳಹದಿಯ ಮೇಲೆ ಬೆಳೆದು ನಿಂತದ್ದು ಹಿಂದೂ ಧರ್ಮವಲ್ಲದೆ ಬೇರಾವ ಧರ್ಮವೂ ಸಿಗಲಾರದು. ಈ ತಳಹದಿಯ ಮೇಲೆ ನಿಂತ ಧರ್ಮವೇ ಸಮಾಜವನ್ನು ಸುಸ್ಥಿತಿಯಲ್ಲಿ ಇರಿಸಬಲ್ಲದು. ಅಂತೆಯೇ ಭಗವಂತನು ಹಿಂದೂ ಧರ್ಮದ ರಕ್ಷಣೆಗಾಗಿ ಮೇಲಿಂದ ಮೇಲೆ ಅವತರಿಸುತ್ತಾನೆ.

ಇಲ್ಲಿ ಹಿಂದೂ ಧರ್ಮದ ಬಗ್ಗೆ ಇನ್ನಿಷ್ಟು ವಿವೇಚನೆ ಮಾಡುವದು ಅವಶ್ಯವಾಗಿದೆ. ಭಗವಂತನು ಚತುರ್ವರ್ಣಗಳನ್ನು ತಾನೇ ಉಂಟು ಮಾಡಿರುವೆನೆಂದು ಹೇಳಿದ ಮಾತನ್ನು ಕೇವಲ ಭಾವಿಕರಷ್ಟೇ ಒಪ್ಪಬೇಕಲ್ಲದೆ ಅಭಾವಿಕರಿಗೆ ಅಥವಾ ಧರ್ಮವಿರೋಧಕರಿಗೆ ಇದೊಂದು ಟೀಕೆಯ ವಿಷಯ ವಾಗುವಂತಿದೆ. ಯಾಕಂದರೆ ಮಾನವ ಕುಲದ ಉತ್ಪತ್ತಿ ಆದಕೂಡಲೇ ಚತುರ್ವರ್ಣಗಳು ಉತ್ಪನ್ನವಾಗಿರಲಿಲ್ಲ ಎಂದು ಉತ್ಕ್ರಾಂತಿವಾದಿಗಳು ಅನ್ನುವ ದುಂಟು. ಮತ್ತು ಈ ಮಾತು ನಿಜವಾದದ್ದೂ ಆಗಿದೆ. ಮಾನವನಲ್ಲಿ ಕ್ರಮಶಃ ಸುಧಾರಣೆ ಆಗುತ್ತ ಬಂದಂತೆ ಚತುರ್ವರ್ಣಗಳು ಉಂಟಾಗಿರುವ ವೆಂಬ ಮಾತು ಸಿದ್ಧವಾಗುತ್ತದೆ. ಹೀಗಿದ್ದು ಭಗವಂತನು ಹೇಳಿದ್ದು ಹೇಗೆ ಸತ್ಯ ? ಎಂಬ ಪ್ರಶ್ನೆಯು ಸಹಜವಾಗಿ ಉತ್ಪನ್ನವಾಗುತ್ತದೆ.

ಈ ಪ್ರಶ್ನೆಗೆ ಉತ್ತರವನ್ನು ತಿಳಿದುಕೊಳ್ಳಬೇಕಾದರೆ ಹಿಂದೂ ಧರ್ಮದ ಉತ್ಪತ್ತಿಯಾಗುವದು ಹೇಗೆಂಬುದನ್ನು ತಿಳಿದುಕೊಳ್ಳುವದು ಅವಶ್ಯವು.

ಹಿಂದೂ ಧರ್ಮವನ್ನುಳಿದು ಎಲ್ಲ ಧರ್ಮಗಳಿಗೂ ಒಬ್ಬೊಬ್ಬರೇ ಧರ್ಮ ಸ್ಥಾಪಕರು ಇರುತ್ತಾರೆ. ಆ ಧರ್ಮಸ್ಥಾಪಕರು ಗೊತ್ತುಪಡಿಸಿದ ತತ್ವಗಳೇ ಆಯಾ ಧರ್ಮದವರಿಗೆ ಸರ್ವಮಾನ್ಯವಾದವುಗಳಾಗಿರುತ್ತವೆ. ಅವರು ಹಾಕಿ ಕೊಟ್ಟ ನಿಯಮಗಳನ್ನು ಚಾಚೂ ತಪ್ಪದೇ ಪಾಲಿಸಬೇಕು. ಒಟ್ಟಾರೆ ಆ ಧರ್ಮಗಳು ನಿರಂಕುಶ ರಾಜಪ್ರಭುತ್ವವನ್ನು ಹೋಲುತ್ತವೆ. ಆದರೆ ಹಿಂದೂ ಧರ್ಮದ ಮಾತು ಹಾಗಲ್ಲ. ಈ ಧರ್ಮಕ್ಕೆ ಸಂಸ್ಥಾಪಕರು ಇಂಥವರೇ ಎಂದು ಹೇಳಲು ಸಾಧ್ಯವಿಲ್ಲ. ಹಿಂದೂ ಧರ್ಮಕ್ಕೆ ಮೂಲ ಆಧಾರ ಗ್ರಂಥ ಗಳೆಂದರೆ ಚತುರ್ವೇದಗಳು. ಅವು ಬ್ರಹ್ಮನ ನಾಲ್ಕು ಮುಖದಿಂದ ಹೊರಟವು ಎಂದು ಹೇಳಲಾಗುತ್ತದೆ. ಈ ಮಾತಾದರೂ ಚತುರ್ವರ್ಣಗಳ ಉತ್ಪತ್ತಿಯಂತೆ ಗೂಢ ಪ್ರಶ್ನೆಯೇ ಆಗಿದೆ

ಚತುರ್ವೇದಗಳಲ್ಲಿ ಮೊದಲಿನದಾದ ಋಗ್ವೇದವನ್ನು ಆರ್ಕ್ಟಿಕ ಮಹಾ ಸಾಗರದ ದಂಡೆಯಲ್ಲಿದ್ದ ಆರ್ಯರು ರಚಿಸಿದರು. ಮುಂದಿನ ಮೂರು ವೇದಗಳು ಆ ಆರ್ಯರು ಭಾರತಕ್ಕೆ ಬಂದ ಮೇಲೆ ರಚಿಸಲ್ಪಟ್ಟವು ಯಾವ ಕಾಲದಲ್ಲಿ ಅಕ್ಷರ, ಲಿಪಿ, ಓದು ಬರೆಹಗಳು ಬಳಿಕೆಯಲ್ಲಿ ಬಂದಿದ್ದಿಲ್ಲವೋ;

ಅಂಥ ಅನಾಗರಿಕ ಕಾಲದಲ್ಲಿ ಇಂದಿಗೂ ಸಾಮಾನ್ಯರಿಗೆ ಅರ್ಥವಾಗದ ಸೂತ್ರ ಮಂತ್ರಗಳನ್ನೂ ರಚಿಸಿದ ಆ ಋಷಿಪುಂಗವರು ಬ್ರಹ್ಮಸ್ವರೂಪರೇ ಅಲ್ಲವೇ? ಈ ವೇದಗಳನ್ನೂ ರಚಿಸಿದ ಬ್ರಹ್ಮಜ್ಞಾನಿಗಳ ನಾಮಾವಳಿಗಳನ್ನೇ ಪ್ರಕಟಿಸುವ ದಕ್ಕಿಂತ ವೇದಗಳ ಕರ್ತಾರನು ಬ್ರಹ್ಮನೆಂದೂ ಅವನಿಗೆ ನಾಲ್ಕು ಮುಖ ಗಳಿದ್ದವೆಂದು ಹೇಳಿದ್ದು ಆ ಮಹಾಮಹಿಮರಲ್ಲಿದ್ದ ಬ್ರಹ್ಮೈಕ್ಯ ಭಾವವೇ ಕಾರಣವೆಂದು ಹೇಳಬಹುದು.

ಮುಂದೆ ಈ ಚತುರ್ವೇದಗಳನ್ನೇ ಆಧಾರವಾಗಿ ಇಟ್ಟುಕೊಂಡು ಅನೇಕ ಉಪನಿಷತ್ತುಗಳು ಬರೆಯಲ್ಪಟ್ಟವು ನಂತರ ಬ್ರಹ್ಮಸೂತ್ರಗಳು ರಚಿಸಲ್ಪಟ್ಟವು. ಹೀಗೆ ಸನಾತನ ಹಿಂದೂ ಧರ್ಮಸೂತ್ರಗಳು ಅನೇಕ ಮುಖಗಳಿಂದ ನಿರ್ಮಿ ಸಲ್ಪಟ್ಟವುಗಳನ್ನೇ ಒಟ್ಟುಗೂಡಿಸಿ, ಯಾಜ್ಞವಲ್ಕ್ಯ, ಮನು ಮೊದಲಾದ ಸ್ಮೃತಿಕಾರರು ಕಾನೂನು ರೂಪದಲ್ಲಿ ಬರೆದು ಬಳಕೆಯಲ್ಲಿ ತಂದಿದ್ದಾರೆ. ಇವುಗಳಲ್ಲದೆ ಭಗವದ್ಗೀತೆ, ಶಿವಗೀತೆ, ಅನುಗೀತೆ ಮುಂತಾದ ಗ್ರಂಥಗಳು ಸಮಾಜದ ರೀತಿ, ನೀತಿಗಳನ್ನು ಬೋಧಿಸಿರುತ್ತವೆ. ಮುಂದೆ ಹಿಂದೂ ಧರ್ಮವು ಕಾಲಚಕ್ರದ ಹೊಡೆತಕ್ಕೆ ಸಿಲುಕಿ ಅವನತಿಗೆ ಇಳಿಯುವ ಪ್ರಸಂಗ ಬಂದಾಗ ಶ್ರೀಮದಾದ್ಯ ಶಂಕರಾಚಾರ್ಯರು, ಶ್ರೀರಾಮಾನುಜಾಚಾರ್ಯರು, ಶ್ರೀಮನ್ ಮಧ್ವಾಚಾರ್ಯರು, ಶ್ರೀ ಬಸವಣ್ಣನವರು, ಶ್ರೀ ನಿಜಗುಣ ಶಿವಯೋಗಿವರ್ಯರೇ ಮೊದಲಾದ ಅನೇಕ ತತ್ವಜ್ಞಾನಿಗಳು ಮೇಲಿನ ಧರ್ಮ ಗ್ರಂಥಗಳನ್ನೇ ಆಧಾರವಾಗಿಟ್ಟುಕೊಂಡು, ತಮತಮಗೆ ಸರಿಕಂಡ ತತ್ವ ಗಳನ್ನು ಸಮಾಜಕ್ಕೆ ಬೋಧಿಸಿ ತಮ್ಮ ತತ್ವಗಳಿಗನುಸಾರವಾಗಿ ಬೇರೆ ಬೇರೆ ಪಂಥ ಸ್ಥಾಪಿಸಿಕೊಂಡಿದ್ದಾರೆ. ಕಾಲಕ್ಕೆ ತಕ್ಕಂತೆ ಸಮಾಜಕ್ಕೆ ಮಾರ್ಗ ದರ್ಶನ ಮಾಡುವ ಸಾಧುಸಂತರಿಗಂತೂ ಭಾರತದಲ್ಲಿ ಯಾವ ಕಾಲಕೂ ಯಾವ ಭಾಗಕ್ಕೂ ಕೊರತೆ ಇಲ್ಲವೆ ಇಲ್ಲ. ಹೀಗೆ ಹಿಂದೂ ಧರ್ಮವು ಅನೇಕ ಮುಖಗಳಿಂದ ಉತ್ಪತ್ತಿ ಆಗಿದ್ದು ಅನೇಕ ವಿವಿಧ ತತ್ವಗಳಿಂದ ಅನೇಕ ಪಥ ಗಳಿಂದ ಬೆರೆತು ಬೆಳೆದುಬಂದದ್ದಾಗಿದೆ. ಒಟ್ಟಾರೆ ವಿಚಾರ ಮಾಡಿದರೆ ಹಿಂದೂ ಧರ್ಮರಚನೆಯು ಉಚ್ಚಮಟ್ಟದ ಪ್ರಜಾತಂತ್ರೀಯ ಕಾನೂನು ಬದ್ಧ ವಾದದ್ದೆಂದು ಹೇಳಬಹುದು. ಜಗತ್ತು ಅಜ್ಞಾನದಲ್ಲಿ ಇದ್ದಾಗ ಜನಿಸಿ ಲೋಕ ಕಲ್ಯಾಣವನ್ನು ಸಾಧಿಸಿದ ಈ ತತ್ವಜ್ಞಾನಿಗಳು ಭಗವಂತ ತೇಜಾಂಶ

ಸಂಭೂತರಾಗಿದ್ದರೆನ್ನಲಿಕ್ಕೆ ಯಾವ ಸಂಶಯವೂ ಇಲ್ಲ. ಇಷ್ಟೇ ಅಲ್ಲ. ಭಗವಂತನೇ ಗೀತೋಪದೇಶದಲ್ಲಿ ಇದೇ ಮಾತನ್ನು ಸ್ಪಷ್ಟಪಡಿಸಿದ್ದಾನೆ.

**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂಚ ಸರ್ವಶಃ ।**

(ಭ. ಗೀ. ೧೦, ೨)

" ದೇವತೆಗಳ ಮತ್ತು ಮಹರ್ಷಿಗಳ ಉತ್ಪತ್ತಿಗೆ ಎಲ್ಲ ರೀತಿಯಿಂದಲೂ ನಾನೇ ಕಾರಣನಾಗಿದ್ದೇನೆ. "

ಇದರ ಮೇಲಿಂದ ಹಿಂದೂ ಧರ್ಮಸೂತ್ರಗಳನ್ನು ರಚಿಸಿದ ಮಹರ್ಷಿಗಳೂ ಕಾಲಕ್ಕೆ ತಕ್ಕಂತೆ ಬೇರೆ ಬೇರೆ ತತ್ವಗಳನ್ನು ಬೋಧಿಸಿದ ತತ್ವಜ್ಞಾನಿಗಳೂ ಭಗವಂತನ ಇಚ್ಛೆಯಂತೆಯೇ ವರ್ತಿಸಿದವರು ಎಂದು ಹೇಳಲು ಅಡ್ಡಿ ಇಲ್ಲ.

ಜಗದುತ್ಪಾದಕನಾದ ಪರಬ್ರಹ್ಮನು ( ಭಗವಂತನು ) ಅವ್ಯಕ್ತನೂ ಅವಿನಾಶನೂ ನಿರಾಕಾರನೂ ಇರುವನು. ( ಈ ಮಾತನ್ನು ಬಹುತರ ಎಲ್ಲ ಧರ್ಮದವರೂ ಒಪ್ಪುತ್ತಾರೆ. ) ಆದರೆ ಆತನು ಭಕ್ತರಿಗೆ ಉಪಾಸನೆಯ ಸೌಲಭ್ಯಕ್ಕಾಗಿ ಅನೇಕ ದೇವತೆಗಳನ್ನು ನಿರ್ಮಿಸಿದ್ದಾನೆ ಅಥವಾ ಅಜ್ಞ ಜನರು ತಮ್ಮ ತಮ್ಮ ಭಾವನೆಗಳಂತೆ ಕಲ್ಪಿಸಿ ಆರಾಧಿಸುವ ದೇವತೆಗಳಲ್ಲಿ ತಾನು ಅಧಿಷ್ಠಿತನಾಗಿರುತ್ತೇನೆ, ಎಂತಲೂ ಆ ದೇವತೆಗಳನ್ನು ಕುರಿತು ಮಾಡಿದ ಉಪಾಸನೆಗಳನ್ನು ತಾನು ಸ್ವೀಕರಿಸಿ ಅವರಿಗೆ ಇಚ್ಛಿತ ಫಲಗಳನ್ನು ಕೊಡುತ್ತೇನೆ ಎಂತಲೂ ಭಗವಂತನು ಗೀತೆಯಲ್ಲಿ ಹೇಳಿದ್ದಾನೆ. ಆದ್ದರಿಂದ ಎಲ್ಲ ದೇವತೆಗಳಿಗೆ ಕಾರಕನೂ ಭಗವಂತನೇ ಆಗಿದ್ದಾನೆ. ಅದರಂತೆಯೇ ಒಂದು ರಾಷ್ಟ್ರದ ಅಧಿಪತಿಯು ತನ್ನ ರಾಷ್ಟ್ರದಲ್ಲಿ ಸೌಖ್ಯ, ಸುವ್ಯವಸ್ಥೆ ನೆಲೆಸುವದಕ್ಕಾಗಿ ರಾಷ್ಟ್ರದ ತುಂಬ ಸಣ್ಣ ದೊಡ್ಡ ಅಧಿಕಾರಿಗಳನ್ನು ನೇಮಿಸುವಂತೆ ಭಗವಂತನಾದರೂ ತಾನು ನಿರ್ಮಿಸಿದ ಜಗತ್ತು ಸುಸ್ಥಿತಿಯಲ್ಲಿ ಬಾಳಿ ಬೆಳೆಯುವಂತೆಯೂ ಕಲ್ಯಾಣಕರವಾಗುವಂತೆಯೂ ಮಾರ್ಗದರ್ಶಕರಾಗುವಂತೆ ಕಾಲಕಾಲಕ್ಕೆ ಋಷಿಗಣವನ್ನು ನಿರ್ಮಿಸುತ್ತಾನೆ. ಇಂಥ ಋಷಿಗಣವೇ ನಮ್ಮ ಹಿಂದೂ ಧರ್ಮಸಂಸ್ಥೆಯ ಸದಸ್ಯರಾಗಿರುತ್ತಾರೆ. ಆದ್ದರಿಂದ ಹಿಂದೂ ಧರ್ಮ ಸ್ಥಾಪನೆ ರಕ್ಷಣೆಗಳ ಸರ್ವಾಧಿಕಾರವು ಪರ್ಯಾಯದಿಂದ ಭಗವಂತನಿಗೆ

ಸಲ್ಲುತ್ತದೆ. ಅಂತೆಯೇ ಭಗವಂತನು "ಚತುರ್ವರ್ಣ್ಯಂ ಮಯಾ ಸೃಷ್ಟಂ" ಎಂದು ಹೇಳಿದ್ದಾನೆ

ಹಿಂದೂ ಧರ್ಮದಲ್ಲಿ ತತ್ತ್ವಭೇದಗಳಿಂದ ಅನೇಕ ಪಂಥಗಳು ಉಂಟಾದಂತೆ ಉಪಾಸನಾ ಭೇದಗಳಿಂದಲೂ ಅನೇಕ ಪಂಗಡಗಳು ಉಂಟಾಗಿರುತ್ತವೆ. ಮುಸ್ಲೀಮಾದಿ ಇತರ ಧರ್ಮಗಳಲ್ಲಿ ಒಬ್ಬನೇ ದೇವರೆಂದು ಭಾವಿಸಿ ಆತನ ನಿರಾಕಾರ ಸ್ವರೂಪವನ್ನೇ ಧ್ಯಾನಿಸುತ್ತಾರೆ. ಮೂರ್ತಿಪೂಜೆಯನ್ನು ನಿಷೇಧಿಸುತ್ತಾರೆ. ಹಿಂದೂ ಧರ್ಮದಲ್ಲಿಯಾದರೂ ಭಗವಂತನು ಒಬ್ಬನೇ ಇರುವನೆಂದೂ ಆತನು ನಿರಾಕಾರನೂ ನಿರ್ಗುಣನೂ, ಅವಿನಾಶಿಯೂ, ಅವ್ಯಕ್ತನೂ ಇರುತ್ತಾನೆಂದು ನಂಬುತ್ತಾರೆ. ಭಗವಂತನೇ ತನ್ನ ನಿಜ ಸ್ವರೂಪದ ಬಗ್ಗೆ ಗೀತೆಯಲ್ಲಿ ಹೇಳಿದ್ದಾನೆ.

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೆ ಮಾಮ ಬುದ್ಧಯಃ ।**
**ಪರಂಭಾವಮಜಾನಂತೋ ಮಮಾವ್ಯಯಮನುತ್ತಮಮ್ ॥**
**(ಭ. ಗೀ. ೭,೨೪)**

**ಅರ್ಥ:** – "ಬುದ್ಧಿಹೀನರಾದವರು ನನ್ನ ಶ್ರೇಷ್ಠತರವಾದ ಅವ್ಯಕ್ತತ್ವವನ್ನು ಅರಿಯದವರಾದ ಕಾರಣ ನನ್ನನ್ನು ವ್ಯಕ್ತರೂಪಗಳಲ್ಲಿ ಇರುವವನೆಂದು ಭಾವಿಸುತ್ತಾರೆ."

ಹೀಗೆ ಭಗವಂತನು ತನ್ನ ರೂಪವನ್ನು ಸ್ಪಷ್ಟಪಡಿಸಿದ್ದಾನಲ್ಲದೆ, ತನ್ನನ್ನು ವ್ಯಕ್ತರೂಪನೆಂದು ಕಾಣುವವರು ಅಜ್ಞಾನಿಗಳೆಂದು ಪ್ರತಿಪಾದಿಸಿದ್ದಾನೆ. ಆದರೂ ಹಿಂದೂ ಧರ್ಮದಲ್ಲಿ ಭಗವಂತನ ಅನೇಕ ರೂಪಗಳನ್ನು (ಮೂರ್ತಿಗಳನ್ನು) ಕಲ್ಪಿಸಿಕೊಂಡಿದ್ದಾರೆ ಮತ್ತು ಅವುಗಳ ಉಪಾಸನೆ ಮಾಡುತ್ತಾರೆ. ಇದಕ್ಕಾದರೂ ಯೋಗ್ಯ ಕಾರಣವಿಲ್ಲವೆಂತಲ್ಲ ಅವ್ಯಕ್ತ ಪರಬ್ರಹ್ಮನಲ್ಲಿ ನಿಷ್ಠೆಯನ್ನಿಟ್ಟು ಆರಾಧಿಸುವದು ಜ್ಞಾನಿಗಳಿಗೆ ಮಾತ್ರ ಸಾಧ್ಯವಲ್ಲದೆ ಅಜ್ಞಾನಿಗಳಿಗೆ ಅದು ಸಾಧ್ಯವಾಗಲಾರದು. ಆದರಿಂದ ಅವರಲ್ಲಿ ದೈವಭಕ್ತಿ ಹುಟ್ಟಲಾರದು. ಮತ್ತು ಉಪಾಸನೆಯ ಅವಶ್ಯಕತೆಯು ನಿಜವಾಗಿ ಅಜ್ಞಾನಿಗಳಿಗೇ ಇರುತ್ತದೆ. ಜ್ಞಾನಿಗಳಿಗೆ ಉಪಾಸನೆಯ ಆವಶ್ಯಕತೆಯೇ ಇರುವದಿಲ್ಲ ಭಗವಂತನ ನಿಜರೂಪವನ್ನು ಅರಿತುಕೊಂಡವರು ಸ್ವತಃ ಬ್ರಹ್ಮಸ್ವರೂಪರೇ

ಆಗಿರುತ್ತಾರೆ. ಕೇವಲ ಲೋಕಸಂಗ್ರಹ (ಕಲ್ಯಾಣ ಕ್ಕಾಗಿ ಮಾತ್ರ ಅವರು ಜಪ, ಅನುಷ್ಠಾನಾದಿಗಳನ್ನು ಮಾಡಿ ಸಾಮಾನ್ಯ ಜನರಲ್ಲಿ ದೈವಭಕ್ತಿ ಹುಟ್ಟಿಸ ಲಿಕ್ಕೆ ಬೆಳೆಯಿಸಲಿಕ್ಕ ಕಾರಣರಾಗುತ್ತಾರೆ ನಿಜವಾಗಿ ಅಜ್ಞಾನಿಗಳಿಗೆ ಮಾತ್ರ, ಧರ್ಮ, ದೇವತೆ, ಪೂಜೆ, ನೀತಿ, ನಿಷ್ಠೆಗಳ ಅವಶ್ಯಕತೆ ಇರುತ್ತದೆ ಅಂತೆಯೇ ಧರ್ಮಧುರೀಣರು ಅಜ್ಞರ ಕಲ್ಯಾಣಕ್ಕಾಗಿ ಅನೇಕ ಸಗುಣ (ವ್ಯಕ್ತ) ದೇವತೆ ಗಳ ಉಪಾಸನೆಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ಇದೇ ಮೂರ್ತಿಪೂಜೆಯು ಗುಟ್ಟಾಗಿರುತ್ತದೆ. ಸಂಸಾರಿಕರು ತಮಗೊದಗುವ ಕಷ್ಟನಷ್ಟಗಳ ಪರಿಹಾರ ಕ್ಕಾಗಿಯೂ ಸೌಖ್ಯ-ಸಿರಿಗಳನ್ನು ಸಂಪಾದಿಸುವದಕ್ಕಾಗಿಯೂ ದೇವತೆಗಳ ಮೊರೆ ಕೇಳುವದು ಸ್ವಾಭಾವಿಕವು. ಇಂಥ ಸಮಯದಲ್ಲಿ ಅವರು ಪರಾನು- ಕಣದಿಂದಲೋ ಅಥವಾ ತಮ್ಮ ಮನೆತನದಲ್ಲಿ ನಡೆದುಬಂದ ರೂಢಿಯಿಂದಲೋ ಒಂದು ನಿರ್ದಿಷ್ಟ ದೇವತೆಯನ್ನು ಪೂಜಿಸುತ್ತಾರೆ. ಆ ದೇವತೆಯ ಕುರಿತು ವ್ರತ, ಉಪವಾಸ ನಿಯಮಗಳನ್ನು ಪಾಲಿಸುತ್ತಾರೆ. ಆಗ ಅವರು ಸಹಜ ವಾಗಿಯೇ ಆ ದೇವತೆಯಲ್ಲಿ ನಿಷ್ಠೆಯನ್ನಿಡಬೇಕಾಗುತ್ತದೆ. ಈ ರೀತಿಯಾಗಿ ಅಜ್ಞರಲ್ಲಿ ದೈವಭಕ್ತಿ ಹುಟ್ಟಲಿಕ್ಕೆ ಆರಂಭವಾಗುತ್ತದೆ. ಮತ್ತು ಹೀಗೆ ನಿಷ್ಠೆ ಯಿಂದ ಆಚರಿಸಿದ ಪೂಜೆ, ವ್ರತ ನಿಯಮಗಳ ಫಲವಾಗಿ ಅವರಿಗೆ ತಕ್ಕ ಫಲವೂ ಸಿಗುತ್ತದೆ. ಭಗವಂತನು ಕೂಡ ಗೀತೆಯಲ್ಲಿ ಈ ಬಗ್ಗೆ ಆಶ್ವಾಸನ ವನ್ನು ಕೊಟ್ಟಿದ್ದಾನೆ:

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥**

(ಭ. ಗೀ. ೪,೧೨.)

**ಅರ್ಥ:**—"ಕೆಲವರು ಕಾಮ್ಯಕರ್ಮಗಳನ್ನು ಮಾಡುತ್ತಾ ದೇವತೆ ಗಳನ್ನು ಭಜಿಸುತ್ತಾರೆ. ಅಂಥವರಿಗೆ ಅವರವರ ಇಷ್ಟಾನುಸಾರವಾಗಿ ಇದೇ ಜನ್ಮದಲ್ಲಿಯೇ ತಕ್ಕ ಫಲಗಳನ್ನು ಕೊಡುತ್ತೇನೆ"

ಹೀಗೆ ಮೂರ್ತಿಪೂಜಕರಿಗೆ ಅಭಯವನ್ನು ನೀಡಿದ್ದಾನೆ. ಲೋಕ ವ್ಯವಹಾರದಲ್ಲಿ ಆದರೂ ಈ ಮಾತಿನ ಸತ್ಯತೆಯು ಕಂಡುಬರುತ್ತವೆ. ಎಂಥ ನಾಸ್ತಿಕನಾದರೂ ಶ್ರೀ ಲಕ್ಷ್ಮೀದೇವಿಯ ಪೂಜೆಯನ್ನು ಬಿಡುವದಿಲ್ಲ.

ಶನಿದೇವರ ಕಾಟ ತಗಬಾರದೆಂದು ವ್ರತಗಳನ್ನು ಮಾಡುವರು ಇಷ್ಟೇ ಅಲ್ಲ. ಅಂತ್ಯಜರ ಉಡಚವನಿಂದಾಗಲಿ ಮುಸ್ಲೀಮರ ಗೋರಿಯಿಂದಾಗಲಿ ತಮ ಇಷ್ಟಾರ್ಥ ಸಿದ್ಧಿಯಾಗುವದೆಂದು ತಿಳಿದುಬಂದರೆ ಅವುಗಳ ಉಪಾಸನೆ ಮಾಡಲಿಕ್ಕೂ ಮತ ಪಂಥಗಳ ಭೇದವನ್ನು ಕೂಡಾ ಲೆಕ್ಕಿಸುವದಿಲ್ಲ. ಮತ್ತು ಅವರಿಗೆ ಅವರ ಭಾವಕ್ಕೆ ತಕ್ಕಂತೆ ಫಲವೂ ಸಿಗುತ್ತದೆ. "ಕಳ್ಳರಿಗೊಲಿವ ಕದರಮುಂಡಲಿಗೀ ಹನುಮಪ್ಪ" ಎಂಬ ಆಖ್ಯಾಯಿಕೆಯಾದರೂ ಇದೇ ಮಾತನ್ನು ಸಿದ್ಧಪಡಿಸುತ್ತದೆ. ಇಲ್ಲಿ ಆ ಹನುಮಪ್ಪನು ನಿಜಕ್ಕೂ ಕಳ್ಳರ ನಾಯಕನಾಗಿರುವದಿಲ್ಲ. ಆ ಕಳ್ಳರಿಗೆ ಮಾತ್ರ ತಮ್ಮ ಕಾರ್ಯಸಿದ್ಧಿಗೆ ಈ ಹನಮಪ್ಪನವರ ಪ್ರಸಾದವೇ ಆಧಾರವೆಂದು ಆತ್ಮವಿಶ್ವಾಸವಿರುತ್ತದೆ. ಈ ಆತ್ಮವಿಶ್ವಾಸವೇ ಭಕ್ತಿ, ಭಾವನೆ, ನಿಷ್ಠೆಯೆಂದು ಹೇಳಲಾಗುತ್ತದೆ ಈ ಪ್ರಕಾರ ಸಗುಣ ಮೂರ್ತಿಗಳ ಮೇಲಿನ ಭಕ್ತಿಯೇ ಕ್ರಮೇಣ ವೃದ್ಧಿಂಗತ ವಾಗಿ ನಿರಾಕಾರ ಪರಬ್ರಹ್ಮನ ಉಪಾಸನೆಯು ಕಡೆಗೆ ಸಾಗುತ್ತದೆ. ಹೀಗೆ ಮೂರ್ತಿಪೂಜೆಯು ಸಾಧಕರಿಗೆ ಆರಂಭದ ಪಾಠವಾಗಿರುತ್ತದೆ. ಖ್ಯಾತಿವಂತ ಭಗವದ್ಭಕ್ತರಾದ ಸಮರ್ಥ ರಾಮದಾಸರು ತಮ್ಮ ಮನೋಬೋಧೆ (ಮನಾಚೇ ಶ್ಲೋಕ)ಯಲ್ಲಿ ಶ್ರೀ ಗಣಪತಿಯ ಬಗೆಗೆ ಬರೆದ ಶ್ಲೋಕವು ಮೂರ್ತಿಪೂಜೆಯ ಹಿರಿಮೆಯನ್ನು ಸ್ಪಷ್ಟಪಡಿಸುವಂತೆ ಇದೆ.

**ಗಣಾಧೀಶ ಜೋ ಈಶ ಸರ್ವಾಗುಣಾಂ ।**
**ಮೂಳಾರಂಭ ಆರಂಭತೋ ನಿರ್ಗುಣಾಚಾ ॥**

**ಅರ್ಥ:**— ಶ್ರೀ ಗಣಪತಿಯು ಎಲ್ಲ ಸಗುಣ ಉಪಾಸನೆಗಳಿಗೆ ಅಧಿಪತಿಯೂ ಆರಂಭನೂ ಆಗಿರುವಂತೆ ನಿರ್ಗುಣ (ಅವ್ಯಕ್ತ ಉಪಾಸನೆ ಗಳಿಗೂ ಆರಂಭಕಾರಕನಾಗಿದ್ದಾನೆ.

ಮೂರ್ತಿಪೂಜೆಯ ನಿಜಸ್ವರೂಪವನ್ನೇ ಸ್ಪಷ್ಟಪಡಿಸಿದಂತೆ ಇರುತ್ತದೆ. ಈ ಶ್ಲೋಕಾರ್ಥವು. ಎಲ್ಲ ರೀತಿಯ ಕಾಮ್ಯಕರ್ಮ, ವ್ರತ, ನಿಯಮ, ಪೂಜೆ ಗಳ ಆರಂಭದಲ್ಲಿ ಶ್ರೀ ಗಣನಾಥನ ಪೂಜೆಯನ್ನು ಅವಶ್ಯವಾಗಿ ಮಾಡಲಿಕ್ಕೆ ಬೇಕು. ಅಂದರೆ ಇಚ್ಛಿತ ಕಾರ್ಯಸಿದ್ಧಿಯಾಗುವದು. ಅಂತೆಯೇ ಆತನಿಗೆ ಸಿದ್ಧಿವಿನಾಯಕನೆಂದು ಹೆಸರು ಬಂದಿದೆ. ಆತನ ಈ ಅಧಿಕಾರವು ನಿರ್ಗುಣ

ಉಪಾಸನೆಯಲ್ಲಿ ಪ್ರಸ್ತಾಪಿಸಲ್ಪಡುತ್ತದೆಂದು ಶ್ರೀ ಸಮರ್ಥರ ಅಭಿಪ್ರಾಯ ವಿರುತ್ತದೆ. ಮೂರ್ತಿಯ ಚಲುವಿಕೆ ರೂಪಗಳನ್ನು ಕಂಡು ಪೂಜಿಸುತ್ತಿರುವ ದಿಲ್ಲ. ಆ ಮೂರ್ತಿಯಲ್ಲಿ ಅಡಗಿರುವ ದೈವೀಶಕ್ತಿಯನ್ನು ಪೂಜಿಸುತ್ತಾರೆ. ಹಿಂದೂ ಧರ್ಮದಲ್ಲಿ ಕ್ಷುದ್ರಭಾವನೆಯಿಂದ ಪ್ರಾರಂಭವಾಗಿ ಬ್ರಹ್ಮೈಕ್ಯತ್ವದ ವರೆಗೂ ಸಾಧಕನಿಗೆ ಸಾಧನೆಗಳ ಸೌಲಭ್ಯಗಳಿರುತ್ತವೆ. ಅಲ್ಲದೆ ನಿತ್ಯಪಾಠ, ಪ್ರವಚನೆ, ಸ್ತೋತ್ರ, ಮಂತ್ರಗಳ ರೂಢಿಯೂ ರಾಮಾಯಣ, ಮಹಾಭಾರತ ಭಾಗವತ ಮೊದಲಾದ ಪುರಾಣಗಳೂ ಹಿಂದೂ ಸಂಸ್ಕೃತಿಯ ಆಧಾರಸ್ತಂಭ ಗಳಾಗಿರುತ್ತವೆ.

ಹೀಗೆ ಸುಲಭವೂ ಸಿದ್ಧವೂ ಆಗಿ ಸಮಾಜವನ್ನು ಸುಸ್ಥಿತಿಗೆ ತರುವ ಹಿಂದೂ ಧರ್ಮವು ಅಳಿಯದಂತಾಗಬೇಕೆಂಬೇ ಭಗವಂತನ ಇಚ್ಛೆಯು. ಆದಕ್ಕಾಗಿಯೇ ಕಾಲಕಾಲಕ್ಕೆ ಆತನು ಭೂಮಿಯ ಮೇಲೆ ಅವತರಿಸುತ್ತಾನೆ. ಅಳಿಯಹತ್ತಿದ ಧರ್ಮವನ್ನು ರಕ್ಷಿಸುತ್ತಾನೆ. ಅಲ್ಲದೆ ಸಮಾಜ ಧುರೀಣರಿಗೂ ತನ್ನ ಅವತಾರ ಕಾರ್ಯವು ಆದರ್ಶವಾಗಲೆಂದೇ ಅವತಾರದ ಕಾಲದಲ್ಲಿ ತಾನು ಮಾಡುವ ಕಾರ್ಯವನ್ನು ವಿವರಿಸಿದ್ದಾನೆ.

**ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ |**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿಯುಗೇಯುಗೇ ||**

(ಭ. ಗೀ. ೪,೮)

**ಅರ್ಥ:**—ಸಾಧು ಜನರನ್ನು ರಕ್ಷಿಸುವದಕ್ಕಾಗಿಯೂ ದುಷ್ಟರನ್ನು ನಾಶ ಮಾಡುವದಕ್ಕಾಗಿಯೂ ಧರ್ಮವನ್ನು ಪ್ರಸ್ಥಾಪಿಸುವದಕ್ಕಾಗಿಯೂ ಕಾಲಕಾಲಕ್ಕೆ ನಾನು ಅವತರಿಸುತ್ತೇನೆ.

ಭಗವಂತನು ಭೂಮಿಯ ಮೇಲೆ ಅವತಾರ ಮಾಡಿದ ಕಾಲಕ್ಕೆ ತಾನು ಮಾಡುವ ಕಾರ್ಯಗಳ ವಿವರವನ್ನು ಈ ಶ್ಲೋಕದಲ್ಲಿ ವಿವರಿಸಿದ್ದಾನೆ. ಆತನು ಮಾಡುವ ಕಾರ್ಯಗಳಲ್ಲಿ ಮೊದಲನೆಯದು ಸಜ್ಜನರನ್ನು ರಕ್ಷಿಸುವದು. ಆದಕ್ಕಾಗಿಯೇ ದುರ್ಜನರನ್ನು ನಾಶಗೊಳಿಸುವದು; ಮತ್ತು ಕಾಲಕ್ಕನುಸಾರ ವಾಗಿ ಧರ್ಮವನ್ನು ಸ್ಥಾಪಿಸುವದು (ಬೋಧಿಸುವದು) ಹೀಗೆ ಭಗವಂತನ

ಅವತಾರ ಕಾರ್ಯದ ಪರಂಪರೆಯಾಗಿದ್ದು, ಇದೇ ಪರಂಪರೆಯನ್ನೇ ತನ್ನ ಭಕ್ತರು ಮುಂದುವರಿಸಬೇಕೆಂದು ಮುಂದಿನ ಶ್ಲೋಕದಲ್ಲಿ ಆದೇಶವಿತ್ತಿದ್ದಾನೆ.

**ಜನ್ಮಕರ್ಮಚ ಮೇ ದಿವ್ಯಮೇವಂ ಯೊ ವೇತ್ತಿ ತತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮನೈತಿ ಮಾಮೇತಿಸೋಽರ್ಜುನ**

—ಭ ಗೀ. ೪.೯

**ಅರ್ಥ:** –ನನ್ನ ಈ ಪ್ರಕಾರದ ದಿವ್ಯವಾದ ಜನ್ಮ ಮತ್ತು ದಿವ್ಯವಾದ ಕರ್ಮಗಳಲ್ಲಿಯ ತತ್ವವನ್ನು ಯಾರು ಅರಿತುಕೊಳ್ಳುವರೋ ಅವನು ದೇಹ ತ್ಯಾಗದ ನಂತರ (ಮರಣಾನಂತರ) ಪುನಃ ಜನ್ಮವನ್ನು ಹೊಂದುವುದಿಲ್ಲ ಹೇ, ಅರ್ಜುನನೇ! ಅವನು ನನ್ನಲ್ಲಿ ಲೀನನಾಗುತ್ತಾನೆ.

ಭಗವಂತನ ಕಾರ್ಯಗಳ ಮರ್ಮವನ್ನು **ಅರಿತು ಅರಿತಂತೆ** ವರ್ತಿಸಿದ ಮನುಷ್ಯನು ಜನನಮರಣಗಳ ಬಂಧನಗಳಿಂದ ಮುಕ್ತನಾಗುತ್ತಾನೆ. ಅಂದರೆ ಮೋಕ್ಷವನ್ನು ಹೊಂದುತ್ತಾನೆ. ಮೋಕ್ಷಪ್ರಾಪ್ತಿಗಾಗಿ ಜಪ, ತಪ, ಅನುಷ್ಠಾನ ಸಂನ್ಯಾಸಗಳಂಥ ಕಠಿಣ ಮತ್ತು ದೀರ್ಘಕಾಲದ ಸಾಧನೆಗಳನ್ನು ಮಾಡಿ ಶ್ರಮಪಡುವದಕ್ಕಿಂತ ಭಗವಂತನ ಈ ಆದೇಶದಂತೆ ವರ್ತಿಸಿದರೆ ಮನುಷ್ಯನು ಸುಲಭದಲ್ಲಿ ಮೋಕ್ಷಪದವನ್ನು ಹೊಂದುತ್ತಾನೆ. ಜಗತ್ತಿನ ಮತ್ತು ಸಮಾಜದ ಧಾರಣೆ, ಪೋಷಣೆಗಳಿಗಾದರೂ ಶಿಷ್ಟಪರಿಪಾಲನೆ, ದುಷ್ಟನಿಗ್ರಹ ಮತ್ತು ಧರ್ಮಜಾಗೃತಿ ಈ ಕಾರ್ಯಗಳೇ ಮುಖ್ಯವಾಗಿರುತ್ತವೆ. ಸಮಾಜದ ಹಿತಚಿಂತನೆ ಬಯಸುವ ನಮ್ಮ ಸಮಾಜಧುರೀಣರು ಜಗತ್ಪೋಷಕನಾದ ಭಗವಂತನ ಈ ಆದೇಶದಂತೆ ವರ್ತಿಸಿದರೆ ನಮ್ಮ ರಾಷ್ಟ್ರವು ಸ್ವಲ್ಪೇ ಕಾಲದಲ್ಲಿ ಸುಸಂಸ್ಕೃತವೂ ಸರ್ವಸುಖ ಪರಿಪೂರ್ಣವೂ ಆಗಿ ಮೆರೆಯುವಲ್ಲಿ ಸಂದೇಹವಿಲ್ಲ.

ಕಳೆದ ಐದು ಸಾವಿರ ವರ್ಷಗಳಿಂದಲೂ ನಮ್ಮ ಭಾರತವು ಶ್ರೇಷ್ಠತರವಾದ ಸುಸಂಸ್ಕೃತಿ ಮತ್ತು ಧರ್ಮಾಚರಣೆಗಳಿಂದ ನಡೆದು ಸಕಲ ಸಿರಿ-ಸೌಖ್ಯಗಳಿಂದ ಸಮೃದ್ಧವಾಗಿ ಜಗತ್ತಿಗೇ ಆದರ್ಶವಾಗಿದೆ. ಜಗತ್ತಿನಲ್ಲಿಯೆ ಪುರಾತನವೆನಿಸಿದ ರಾಷ್ಟ್ರಗಳಲ್ಲಿ ನಮ್ಮ ಭಾರತವು ಗಣಿಸಲ್ಪಟ್ಟಿದೆ. ಅಂದಿನಿಂದಲೂ ಭಾರತದಲ್ಲಿ ಹಿಂದೂ ಧರ್ಮ, ಸಂಸ್ಕೃತಿ, ನೀತಿ, ನಡತೆಗಳು ಒಂದೇ ರೀತಿಯಲ್ಲಿ ಸಾಗಿಬಂದಿವೆ. ಭಾರತದಲ್ಲಿ ಆಗ ಅನೇಕ ರಾಜ್ಯಗಳೂ ಅನೇಕ ಮತ, ಪಂಥ, ಪಂಗಡಗಳು ಇದ್ದರೂ ಸಹ ಸಂಸ್ಕೃತಿಯಲ್ಲಿ

ಬದಲಾವಣೆ ಆಗಿರಲಿಲ್ಲ. ಸನಾತನ ಹಿಂದೂ ಧರ್ಮದಲ್ಲಿ ಕುಂದು-ಕೊರತೆಗಳಾಗಲಿಲ್ಲ. ಪರದೇಶದ ಪ್ರವಾಸಿಕರೂ ಇತಿಹಾಸಕಾರರೂ ನಮ್ಮ ದೇಶದ ಸಂಸ್ಕೃತಿಯನ್ನು ಕಾಲಕಾಲಕ್ಕೆ ಬಾಯ್ತುಂಬ ಹೊಗಳುತ್ತ ಬಂದಿದ್ದಾರೆ. ಆದರೆ ಕಳೆದ ಅರ್ಧಶತಮಾನದ ಕಾಲಾವಧಿಯು ಈಚೆಗೆ ನಮ್ಮ ಧರ್ಮ-ಸಂಸ್ಕೃತಿಗಳಿಗೆ ಗ್ರಹಣದ ವೇಧ ಹಿಡಿದಂತಾಗಿದೆ. ಈಗ ಸದ್ಯಕ್ಕಂತೂ "ನಾನು ಹಿಂದೂ ಧರ್ಮದವನು" ಎಂದು ಹೇಳುವವನು ಅಪರಾಧಿಯೆಂದು ಗಣಿಸಲ್ಪಡುವಷ್ಟು ನಮ್ಮ ಧರ್ಮ ಮತ್ತು ಧರ್ಮೀಯರು ಹೀನವೆಸಗೆ ಇಳಿದಿದ್ದಾರೆ.

ಧರ್ಮಾತೀತ ರಾಷ್ಟ್ರವೆಂದರೆ ಸರ್ವಧರ್ಮಗಳಿಗೂ ಸಂರಕ್ಷಣೆ ಕೊಡುವ ರಾಷ್ಟ್ರ ಎಂದು ಸ್ಪಷ್ಟವಾಗಿಯೇ ಹೇಳಬೇಕಾಗಿತ್ತು. ಅನೇಕ ಜಾತಿ-ಮತ, ಪಂಥ-ಪಂಗಡಗಳೂ ಧರ್ಮಗಳೂ ಹುಟ್ಟಿ ಬೆಳೆದು ಬಾಳಿದ್ದು ನಮ್ಮ ದೇಶಕ್ಕೆ ಒಂದು ಭೂಷಣವೆಂದೇ ಹೇಳಲಡ್ಡಿ ಇಲ್ಲ. ಜಗತ್ತಿನಲ್ಲಿ ಯಾವ ರಾಷ್ಟ್ರದಲ್ಲಿಯೂ ಇಲ್ಲದಷ್ಟು ಧರ್ಮಸ್ವಾತಂತ್ರ್ಯವು ಎಂದಿನಿಂದಲೂ ಇರುತ್ತಿದೆ, ಎಂದು ಹೆಮ್ಮೆಯಿಂದ ಹೇಳುವ ಮಾತಾಗಿದೆ. ಒಂದೇ ದೇಶದಲ್ಲಿ ಬೇರೆ ಬೇರೆ ಎರಡು ಧರ್ಮಗಳೂ ಕೂಡ ಸೌಹಾರ್ದತೆಯಿಂದ ನೆಲೆಸಿ ಬಾಳಿದ್ದು ಜಗತ್ತಿನಲ್ಲಿ ಯಾವ ದೇಶದಲ್ಲಿಯೂ ಕಂಡು ಬರುವದಿಲ್ಲ. ಆದರೆ ಭಾರತದಲ್ಲಿ ಧರ್ಮ ದ್ವೇಷವು ಅಂಕುರಿಸಿ ಬೆಳೆಯಹತ್ತಿದ್ದು ಮುಸಲ್ಮಾನರ ಆಳಿಕೆ ಪ್ರಾರಂಭವಾದ ನಂತರ ಅದು ಕೂಡ ಕೇವಲ ಮುಸಲ್ಮಾನರಲ್ಲಿ ಮಾತ್ರ ಇತ್ತು. ಹಿಂದೂ ಧರ್ಮ, ದೇವಾಲಯ ಮತ್ತು ಪವಿತ್ರ ಸ್ಥಳಗಳನ್ನು ಭ್ರಷ್ಟಗೊಳಿಸುವದೂ ತಮ್ಮ ಧರ್ಮವನ್ನು ಬೆಳೆಯಿಸುವದೂ ಅವರ ಮುಖ್ಯ ಗುರಿಯಾಗಿತ್ತು, ಎಂಬುದನ್ನು ಇತಿಹಾಸವು ಹೇಳುತ್ತದೆ. ಆದರೆ ಹಿಂದೂ ಧರ್ಮದವರು ಕೇವಲ ತಮ್ಮ ಧರ್ಮದ ಮೇಲೆ ಆಗುತ್ತಿರುವ ಆಕ್ರಮಣ ಅತ್ಯಾಚಾರಗಳನ್ನು ತಡೆಯುತ್ತಿದ್ದರೇ ವಿನಾ ಅವರ ಧರ್ಮವನ್ನು ದ್ವೇಷಿಸುತ್ತಿದ್ದಿಲ್ಲ. ಅವರ ಧರ್ಮದಲ್ಲಿ ಕೈಹಾಕುತ್ತಿದ್ದಿಲ್ಲ. ತಮ್ಮ ಧರ್ಮವನ್ನು ಕಾಯ್ದುಕೊಳ್ಳುವ ಸಾಮರ್ಥ್ಯಕ್ಕೂ ಸ್ವಾಭಿಮಾನಕ್ಕೂ ಹಿಂದೂ ಜನರಲ್ಲಿ ಎಂದೆಂದಿಗೂ ಕೊರತೆ ಇದ್ದಿಲ್ಲ ಅಂತೆಯೇ ಸಾವಿರ ವರ್ಷದಿಂದಲೂ ನಡೆಯುತ್ತಿರುವ ಮುಸ್ಲೀಮರ ದಬ್ಬಾಳಿಕೆಯನ್ನೂ ಕ್ರೈಸ್ತರ ಅಘಾತವನ್ನೂ

ಪ್ರತಿಭಟಿಸುತ್ತ ಅಕ್ಷಯವಾಗಿ ಬೆಳೆದು ನಿಂತಿದೆ. ಅದರಂತೆಯೇ ಜಾತಿ, ಮತ, ಪಂಥಗಳ ಮಾತಾದರೂ ಇರುತ್ತದೆ. ಪರಸ್ಪರರು ಬಂಧುಭಾವದಿಂದಲೂ ಸಹಕಾರದಿಂದಲೂ ನಡೆದುಕೊಂಡು ಬಂದಿದ್ದಾರೆ.

ನಮ್ಮ ಧರ್ಮ ಸಂಸ್ಕೃತಿಗಳಿಗೆ ಪ್ರತೀಕದಂತಿಪ್ಪ ಸತ್ಯ, ಸಹಕಾರ ಸಹಜೀವನ, ಸಹಿಷ್ಣುತೆ, ಸದಾಚಾರ ಸದ್ಭಾವನೆಗಳನ್ನು ಕಾಯ್ದುಕೊಂಡು ಪರಾನುಕರಣದಿಂದ ನಮ್ಮಲ್ಲಿ ಬೆರೆತುಕೊಂಡಿರುವ ಪರಪೀಡೆ, ಪರನಿಂದೆ, ಅಪರೋತ್ಕರ್ಷ ಅಸಹಿಷ್ಣುತೆ, ದ್ವೇಷ, ಅಸೂಯೆ ಮುಂತಾದ ದುರ್ಗುಣಗಳನ್ನು ದೂರಮಾಡಿದರೆ ಜ್ಯಾತಿದ್ವೇಷವೂ ಹೇಳಹೆಸರಿಲ್ಲದೇ ಹೋಗುತ್ತದೆ.

ಒಟ್ಟಿಗೆ ಸದ್ಯಕ್ಕೆ ಹಿಂದೂ ಧರ್ಮವು ಹಿಂದೆ ಎಂದೂ ಇಲ್ಲದಷ್ಟು ಹೀನ ದೆಶೆಗೆ ಇಳಿದಿದೆ ಹೀಗೆ ಧರ್ಮಕ್ಕೆ ಹೀನದಿಶೆಯುಂಟಾದಾಗಲೆಲ್ಲ ಶ್ರೀಶಂಕರಾಚಾರ್ಯ, ವಿದ್ಯಾರಣ್ಯರೇ ಮೊದಲಾದ ಪರಮಾತ್ಮನ ಅಂಶದಿಂದುದ್ಭವಿಸಿದ ಮಹಾತ್ಮರು ಧರ್ಮದಲ್ಲಿ ಕಾಲಕ್ಕನುಗುಣವಾಗಿ ಸುಧಾರಣೆ ಮಾಡಿ ಸ್ಥಿರಗೊಳಿಸಿದ್ದಾರೆ. ಇದರಂತೆಯೇ ಕರ್ನಾಟಕದಲ್ಲಿ ಸುಮಾರು ಹದಿನೇಳನೇ ಶತಮಾನದ ಪೂರ್ವಾರ್ಧದಲ್ಲಿ ಮುಸ್ಲೀಮರ ಅತ್ಯಾಚಾರದಿಂದ ಹಿಂದೂ ಧರ್ಮಕ್ಕೆ ಆಘಾತವುಂಟಾದಾಗ ಪಂಪಾಕ್ಷೇತ್ರದ ಶ್ರೀ ವಿರುಪಾಕ್ಷೇಶ್ವರನೇ ಮಾನವರೂಪ ಧಾರಣ ಮಾಡಿ, ಶ್ರೀ. ಬಿಷ್ಟಪ್ಪಯ್ಯ ಎಂಬ ಹೆಸರಿನಿಂದ ಖ್ಯಾತಿ ಪಡೆದು ಧರ್ಮಜಾಗೃತಿಯನ್ನುಂಟು ಮಾಡಿದನು. ಆ ಮಹಾಮಹಿಮರ ಈ ಚರಿತ್ರೆಯು ಈಗಿನ ಧಾರ್ಮಿಕ ಅವನತಿಯ ಕಾಲದಲ್ಲಿಯೂ ಆಸ್ತಿಕರಿಗೆ ಹೊಸ ಚೇತನೆಯನ್ನು ಉಂಟುಮಾಡುವಂತಿದೆ.

---

# ಪ್ರಕರಣ ೨

## ಸಂಸ್ಕೃತ ಶ್ಲೋಕ ಅನುಷ್ಟುಪ ವೃತ್ತದಲ್ಲಿ

# ಶ್ರೀಬಿಷ್ಟೇಶ ಚರಿತ್ರ

(ನನಗೆ ಈ ಪುಸ್ತಕವನ್ನು ಬರೆಯಲು ಆಧಾರವಾಗಿ ದೊರೆತ ಪ್ರರಾಣದ ನಕಲನ್ನು ಇಲ್ಲಿ ಇದ್ದಕ್ಕಿದ್ದಂತೆ ಕನ್ನಡ ಲಿಪಿಯಲ್ಲಿ ಬರೆಯಲಾಗಿದೆ — ಲೇ )

### ಪ್ರಾಸ್ತಾವಿಕ ಸ್ತೋತ್ರ

ಶ್ರೀಮತ್ಪಂಚಾರ್ಯವೇದ್ಯಂ ಗುರುಸಿಗನು-
ಮಹಾಯೋಗಿ ವಾಚಾಮವೇಧ್ಯಂ ।
ಜ್ಯೋತಿಃಸರ್ವೇಶ್ವರಾಖ್ಯಂ ಕಲಿ ಕಲುಷನುಯ-
ಧ್ವಾಂತ ಸೂರ್ಯಪ್ರಕಾಶಂ ॥
ತದ್ಬಿಷ್ಟೇಶಾಖ್ಯ ರೂಪಂ ದಧದಮಲಗುಣಂ
ಪಂಚಕೃತ್ಯೇ ಪ್ರವೀಣಂ ।
ಲೀಲಾ ಮಾಂಗಲ್ಯರೂಪಂ ಭಜಕಜನಕೃಪಾ-
ಪೂರ್ಣಮಂತರ್ನಮಾಮಿ ॥೧॥

ಶಿವೌ ಪರಸ್ಪರಾತ್ಮಾನೌ ಶಿವರೂಪೌ ಶಿವಂಕರೌ
ಭವತಾಂ ಭಜತಾಂ ಭೂತ್ಯೈ ಭಕ್ತಿಯುಕ್ತಃಸಚೇತಸಾಂ ॥೨॥

ಶ್ರೀಮದ್ಗುರುಂ ಗಣೇಶಾನಂ ನಿಧಾಯ ಹೃದಿ ಶಾರದಾಂ ॥
ಭವಾಬ್ಧಿಮಗ್ನಲೋಕಾನಾ । ಮುದ್ಧರಾರ್ಥಂ ಮಹೋತ್ತರಂ ॥೩॥

ಶಿವಾವತಾರ ಬಿಷ್ಟೇಶ ಸಚರಿತ್ರಂ ಮಯೋಚ್ಯತೆ
ಆಶೀತ್ಕುಂತಲನಾಮಾ ಸೌದೇಶಃ ಸರ್ವಾರ್ಥಸಾಧಕಃ ॥೪॥

ಭೂವಧ್ವಾಕುಂತಲ ಇವರಾಜತೆ ಯಃ ಸ್ಥಿರೋ ಭುವಿ ।
ತಸ್ಮಿನ್ನಸ್ತಿ ಮಹಾಕ್ಷೇತ್ರಂ ಪಂಪಾನಾಮ ಮಹೋತ್ಸರಂ ॥೫॥

ಯಸ್ಯ ಸಂದರ್ಶನೇನೈವ ಪಾಪಾನಿಸು ಬಹೂನ್ಯಪಿ ||
ಭಸ್ಮತಾಂ ಯಾಂತಿ ತತ್ಕಾಲೇ ಕಾಸ್ಯಾ ಅಪಿ ಗುಣಾಧಿಕಂ ||೬||

ಹೇಮಕೂಟಾದಿ ಪಂಚಾಖ್ಯ ಪರ್ವತೈಃ ಸುವಿರಾಜಿತಂ ||
ಶ್ರೀರಾಮಾಶ್ರಮ ಸಂಯುಕ್ತಂ ಹನುಮಚ್ಚಲಿತಂ ತಥಾ ||೭||

ಮತಂಗಾದಿ ಮಹಾಮೌನಿಯೋಗೀ ವೃಂದಸಮಾಯಿತಂ ||
ತಸ್ಮಿನ್ನಾಸ್ತೆ ಮಹಾದೇವೋ ವಿರೂಪಾಕ್ಷೋ ಜಗತ್ಪ್ರಭುಃ ||೮||

ಲಿಂಗರೂಪೀ ಮಹೇಶಾನೋ ಭಕ್ತಾಭೀಷ್ಟ ಫಲಪ್ರದಃ ||
ಯಸ್ಯ ದರ್ಶನಮಾತ್ರೇಣ ಮಹಾಪಾಪಾದ್ವಿಮುಚ್ಯತೆ ||೯||

ತುಂಗಭದ್ರಾ ಸಮಾಯುಕ್ತ ದ್ವಾರ ಪ್ರಾಕಾರ ಸಂಯುತಃ ||
ಚತುರ್ದಿಕ್ಷು ಚತುರ್ವ್ಯಕ್ತ ರೂಪಲಿಂಗ ಸಮಾಯುತಃ ||೧೦||

ತಸ್ಮಿನ್ ಕ್ಷೇತ್ರೇ ಮಹಾಪುಣ್ಯೇ ಹ್ಯಪ್ಪಯ್ಯೋನಾಮ ವೈ ದ್ವಿಜಃ ||
ಅತ್ರಿಗೋತ್ರ ಸಮುತ್ಪನ್ನೋ ವೇದವೇದಾಂಗ ಪಾರಗಃ ||೧೧||

ಅನಪತ್ಯೋಹ್ಯಪತ್ಯಾರ್ಥಂ ಕೃತವಾನ್ದುಷ್ಕರಂ ತಪಃ ||
ದ್ವಾದಶಾಬ್ದಂ ಮಹಾಯೋಗಿ ಮಹಾದೇವಸ್ಯ ಸನ್ನಿಧೌ ||೧೨||

ಕಿಂತು ಕಾಲೇನ ಮಹತಾ ಭಗವಾನ್ ಭಾಲಲೋಚನಃ /
ಪ್ರಾದುರ್ಭೂತೋ ಮಹಾದೇವಶ್ಚಂದ್ರಾರ್ಧಕೃತಶೇಖರಃ ||೧೩||

ಅನನ್ಯಧ್ಯಾನನಿರತಂ ಚರಿತಂ ಸುಚಿರಂ ತಪಃ ||
ಉವಾಚ ಪರಯಾ ಪ್ರೀತ್ಯಾವರಂ ವರಯಸುವ್ರತ ||೧೪||

ತಪಸಾ ಪರಿತುಷ್ಟೋಹಂ ಕಿಂ ತೆ ಮನಸಿ ವರ್ತತೆ ||
ದಾಸ್ಯಾಮಿ ತುಭ್ಯಂ ತತ್ಸರ್ವಂ ನಾಸತ್ಯಂ ಮಯಾಭಾಷಿತಂ ||೧೫||

ಇತಿ ತದ್ವಚನಂ ಶ್ರುತ್ವಾಹ್ಯಪ್ಪಯ್ಯೋ ಮುನಿಸತ್ತಮ ||
ಹರ್ಷೇಣ ಮಹತಾವಿಷ್ಟೋಪ್ರಣನಾಮ ಮುಹುರ್ಮುಹುಃ ||೧೬||

ಸಬಾಷ್ಪಲೋಚನೋಯೋಗೀ ರೋಮಾಂಚಿತಕಲೇಬರಃ ||
ನನರ್ತಾನಂದ ಸಂಯುಕ್ತೋ ದೃಷ್ಟ್ವಾಂತಂ ಪುರತಃಸ್ಥಿತಂ ||೧೭||

ಪಂಚವಕ್ತ್ರಂ ತ್ರಿನಯನಂ ಜಟಾಮುಕುಟಭೂಷಣಂ ॥
ಗಂಗಾಧರಂ ವಿರೂಪಾಕ್ಷಂ ಚಂದ್ರಾರ್ಧಕೃತಶೇಖರಂ ॥ ॥೧೮॥
ತುಷ್ಟಾವಪರಯಾ ಭಕ್ತ್ಯಾ ಕುಂದೇಂದು ಧವಲದ್ಯುತಿಂ ॥
ಅನೇಕ ಸ್ತುತಿಭಿಃಸ್ತುತ್ವಾ ರೌದ್ರಸೂಕ್ತ ಪುರೋಗಮೈಃ ॥೧೯॥
ಪ್ರಣಮ್ಯ ಶಿರಸಾಭೂಯಃ ಪ್ರಾಂಜಲಿರ್ದ್ವಿಜಪುಂಗವಃ
ಅನನ್ಯಾಂ ಹ್ಯಚಲಾಂ ಶ್ರದ್ಧಾಂದೇಹಿಮೇ ಜಗತಃಪತೆ ॥೨೦॥
ತ್ವದ್ಭಕ್ತಸಂಗರಹಿತಂ ದಿನಂ ಮಾಭೂತ್ಕದಾಚನ ।
ನಾನ್ಯದ್ವರಂ ಯಾಚಯಿಷ್ಯೆ ತ್ವನ್ನಾಮ ಸ್ಮರಣಾದಪಿ ॥೨೧॥
ಇತ್ಥಂ ಸಂಪ್ರಾರ್ಥಿತಃ ಶಂಭುಃ ಪ್ರಹಸನ್ವಾಕ್ಯ ಮಬ್ರವೀತ ॥
ತಪಸಃ ಕಾರಣಂ ತ್ಯಕ್ತ್ವಾ ಕಿಮನ್ಯದ್ಯಾಚಯಿಷ್ಯಸಿ ॥೨೨॥
ನಾಭುಕ್ತಂ ಕ್ಷೀಯತೇಕರ್ಮ ಕಲ್ಪಕೋಟಿ ಶತೈರಪಿ ॥
ಇತಿ ತದ್ವಚನಂ ಶ್ರುತ್ವಾಹ್ಯಪ್ಯಯ್ಯೋ ಮುನಿಪುಂಗವಃ ॥ ॥೨೩॥
ತಮುಕ್ತವಾನ್ ಮಹಾದೇವಂ ವಿಷಯೇ ವಿಮುಖ: ಸುಧಿಃ ॥೨೪॥
ಪುತ್ರಾರ್ಥಂ ತಪಸಾನಸ್ಯ ವಯೋ ಜಾತಂ ಜಗತ್ಪತೇ ॥
ಅಶೀತಿ ಪಂಚಕಂ ಮೇದ್ಯಂ ಜರಾಶಿಥಿಲ ದೇಹಿನಃ ॥೨೫॥
ಭಾರ್ಯಾಮಮಾಸ್ತಿ ಕಲ್ಯಾಣಿ ಪಂಚಷಷ್ಟಿಕ ವಾರ್ಷಿಕಾ ॥
ಆವಯೋಃ ಯೌವ್ವನಂ ನಾಸ್ತಿ ಪುತ್ರೋತ್ಪತ್ತಿಃಕಥಂ ಭವೇತ ॥೨೬॥
ಇತ್ಥಂ ದ್ವಿಜವಚಃಶ್ರುತ್ವಾಸ್ಮಿತಾಸ್ಯೋ ವಕ್ತುಮುದ್ಯತಃ
ಕೃತಯುಗೇತು ಸಂಪ್ರಾಪ್ತೆ ಧರ್ಮೋನಷ್ಟಃಸನಾತನಃ ॥೨೬॥
ಅದ್ವೈತಸ್ಥಾಪನಾರ್ಥಾಯ ಮಣ್ಮತಃ ಸ್ಥಾಪನಾಯಚ ॥
ಮಾನವೀಂ ತನುಮಾಶ್ರಿತ್ಯ ಶಂಕರಾಚಾರ್ಯ ನಾಮತಃ ॥೨೭ ।
ಅವತೀರ್ಣೋ ಧರಾಯಾಂತು ಚತುರ್ಭಿಸಹಶಿಷ್ಯಕೈಃ
ಇದಾನೀಂ ಚಿರಕಾಲೇನ ವಿನಷ್ಟಂ ಯೋಗ ಶಾಸ್ತ್ರಕಂ ॥ ॥೨೮॥
ಲೋಕೇ ಖ್ಯಾತಿಂ ಗಮಯಿತುಂ ಮಧ್ವಾದ್ಯಾರ್ಯವನ್ನೈರಪಿ ॥೨೯॥

ವಿಧ್ವಂಸಿತಾನಿ ಸರ್ವಾಣಿ ದೇವತಾನಾಂ ಗೃಹಾಣಿಚ ||
ಕ್ಷೇತ್ರಾದಿಕಾನಿ ತೀರ್ಥಾನಿ ಸುಬಹೂನಿಮಿಹಾಂತಿಚ ||೩೦||

ಶೃಣುಷ್ವಾ ವಹಿತೋವಿಪ್ರ ಜೀರ್ಣೋದ್ಧಾರ ಚಿಕೀರ್ಷಯಾ ||
ತ್ವಪುತ್ರತ್ವಮೇಷ್ಯಾಮಿ ಲೀಲಾ ಮಾನುಷ ವಿಗ್ರಹಃ ||೩೧||

ಇತ್ಥಂ ವ್ಯಾಹೃತ್ಯ ಭಗವಾನ್ ಪುತ್ರೀಯಂ ಫಲಮುತ್ತಮಂ ||
ಕರೇದದೌ ತವಕ್ಷೇತ್ರಂ ಪ್ರವಿಶ್ಯಾಮಿತಿ ಸಾದರಂ ||೩೨||

ವ್ರಜಗೇಹಂ ರೇತುಃಪತ್ನಿಂ ಮಾಸ್ತ್ವಶಃದೇಹತಃ ||
ಇತ್ಯುಕ್ತಂ ಸ ದ್ವಿಜೋಗ್ರಾಮಂ ಸೋಗಿ ಸಂಜ್ಞಂಮಹಾನ್‌ಶಿ ಃ||೩೩||

ಪ್ರವಿಶ್ಯ ಪತ್ನ್ಯೈಚಾಖ್ಯಾಯ ದದೌ ತತ್ಫಲಮುತ್ತಮಂ ||
ತತ್ಫಲ ಪ್ರಾಶನಾತ್ಸದ್ಯೋ ದದೌ ಗರ್ಭಂ ಪತಿಂವಿನಾ ||೩೪||

ಪವೃದ್ಧೆ ಗರ್ಭಗೋಯೋಗೀ ಹೃಷೀಕೇಶ ಇವಾಪರಃ ||
ದಶಮೇ ಮಾಸೆ ಸಾಕಾಂತಾ ನಿದ್ರಯಾ ಪೀಡಿತಾಭೃಶಂ ||೩೫||

ಸುಷುಪ್ತಿಕಾಲೇ ಸಿಷ್ವಾಂತಂ ನಿಕಟಸ್ಥಂ ಶಿಶುಂಕಿಲ||
ಸೂರ್ಯಕೋಟಿ ಪ್ರತಿಕಾಶಂ ನಯನಾನಂದದಾಯಕಂ ||೩೬||

ದದರ್ಶ ವಿಸ್ಮಯಾವಿಷ್ಟಾ ಮಾಯಾವಶ ಬಲಾತ್ಸುತಂ ||
ಯಥಾಪೂರ್ವಂ ಹವ್ಯಭುಜಾ ಪ್ರದತ್ತಂ ಪಾಯಸಂ ಮುದೇ ||೩೭||

ಭುಕ್ತ್ವಾರಾಮಂ ಪ್ರಸುಷೌನೇ ಕೌಸಲ್ಯಾ ಬ್ರಹ್ಮನಿರ್ಗುಣಂ ||
ತತೋಸೌವವೃದ್ಧೆನಾಮ್ನಾ ಬಿಷ್ಟಪ್ಪಯ್ಯ ಇತೀರಿತಃ ||೩೮||

ಕೃತೋಪನಯನಃಪಿತ್ರಾ ಬಾಲ್ಯೋ ಶಿವಪರಾಯಣಃ ||
ನಿರ್ಜನಂ ವನಮಾಸಾಧ್ಯ ವಿನಿರ್ಜಿತ್ಯೇಂದ್ರಿಯಾಣಿಚ ||೩೯||

ತಪಶ್ಚಕಾರ ಬಾಲ್ಯೇವ್ವೈ ನಿಧಾಯ ಹೃದಿಶಂಕರಂ ||
ನಿಶಿಥೆ ಸಮನುಪಾಪ್ತೇಗ್ರಾಸಾರ್ಥಂ ಗ್ರಹಮೇಷ್ಯತಿ ||೪೦||

ಏವಂ ಬಹುತರೇಕಾಲೇ ತಪಶ್ಯತಿ ಸುಬಾಲಕೆ ||
ತದಾ ನಿಮಾಯಾಃ ಕಿರಾತಾರ್ಯಾದುಷ್ಟಾಃಯೋ ಸಾಹಸಿ ದಕಃ ||೪೧||

ಬಿಷ್ಟೇಶಂ ಸದ್ಗುರುಂ ಸಿದ್ಧಂ ಮೌನವ್ರತಧರಂ ವಿಭುಂ ॥
ಪರೀಕ್ಷಾಂ ಚಕ್ರುರಸ್ಯೈವ ಸಾಧುಭಾವಾತ್ಸ ಶಂಕಿತಾತ್ ॥೪೨॥

ನಿಷಿಧೆ ಭೋಜನಾರ್ಥಾಯ ಆಗತಂ ಬಿಷ್ಟಯೋಗಿನಂ ॥
ಜ್ಞಾತ್ವಾ ತದಾಪೌರವರ್ಗಾಃ ಪುರದ್ವಾರಂ ಸಮಾಯಯೌ ॥೪೩॥

ಕವಾಟ ಬಂಧನಂ ಕೃತ್ವಾ ಮುದ್ರಿತಾ ರಾಜಮುದ್ರಯಾ ॥
ತದಾ ಶಿವಂ ವಿರೂಪಾಕ್ಷಂ ತುಷ್ಟಾವ ಪರಯಾಮುದ ॥೪೪॥

ದ್ವಾರಭೇದನಕಾರ್ಯಾರ್ಥಂ ಸ್ವಬಹಿರ್ಗಮನಾಯಚ ॥
ಶಂಭುಃಕೃಪಾಂ ಬೋಧಿರಯಂ ಸಚ್ಚಿದಾನಂದ ವಿಗ್ರಹಃ ॥೪೫॥

ತ್ರಯ್ಯಂತ ವೇದ್ಯ ಚರಿತಃ ತಾಪತ್ರಯ ವಿದೂರಕ: ॥
ಷಟ್ಛಕ್ತಿನಾಮಾಶ್ರಯೋಯಃ ಷಡಕ್ಷರ ಮನುಪ್ರಿಯಃ ॥೪೬॥

ಷಡಾಧಾರೋ ಪರಿಸಂಸ್ಥಃ ಷಡಾನನ ಗುರುಃ ಪರಃ ॥
ನಾದಬಿಂದು ಕಳಾಗಮ್ಯೋ ನಾದಾಂತೇಚ ಪ್ರತಿಷ್ಠಿತಃ ॥೪೭॥

ನಾನಾರೂಪಧರಃ ಪಾತು ನಾರಾಯಣ ವರಪ್ರದಃ ॥
ಪಂಚಭೂತಾಂತರಾತ್ಮಾಯಃ ಪಂಚಕೃತ್ಯಪರಾಯಣಃ ॥೪೮॥

ಪಂಚಬ್ರಹ್ಮಮುಖಃ ಪಾತು ಪ್ರಪಂಚಾತೀತಮಾನಸಃ ॥
ಅಷ್ಟಮೂರ್ತಿರ್ಮಹಾಮೂರ್ತಿ ದೀಪ್ತಮೂರ್ತಿರಮೂರ್ತಿಮಾನ್
॥೪೯॥

ಸರ್ವಮೂರ್ತಿ ಮಂತ್ರಮೂರ್ತಿಃ ಪಾಯಾದಸ್ಮಾದಪಾಯತಃ ॥
ಮಹಾಸೇನ ಪಿತಾಯೋಸೌ ಮಹಾಮಹಾ ವಿನೋದನಾತ್ ॥೫೦॥

ಮಾಯಾ ಸಂಸಾರತಃ ಮಹಾಭಯ ವಿದಾರಣಃ ॥
ಹರಿದ್ದೃಕ್ಪುಷ್ಪಪೂಜಾಢ್ಯಃ ಪುಷ್ಪದಂತ ವರಪ್ರದಾಃ ॥೫೧॥

ಚಂದ್ರಪುಷ್ಪಧರಃ ಪಾತು ಮನಃಪುಷ್ಪ ಕೃತಾರ್ಚನಃ ॥
ಷಟ್ತ್ರಿಂಶತತ್ವನಿಃಶ್ರೇಣಿ ಪ್ರಾಸಾದಾಯಿತ ವಿಗ್ರಹಃ ॥೫೨॥

ಪಂಚಾರ್ಣ ಮಂತ್ರವಿಜ್ಞೇಯಃ ಪಾತುಮಾಂ ಪರಮೇಶ್ವರಃ ॥
ಇತಿ ಸ್ತೋತ್ರೇಣ ಸಂತುಷ್ಟೋ ಭಗವಾನ್ ಭಾಲಲೋಚನಃ ॥೫೩॥

ದದೌಚ ಪಾದುಕಾ ಯುಗ್ಮಂ ವೇತ್ರಂ ಶತ್ರುಭಯಾವಹಂ ||
ತತ್ಪಾದುಕಾಂ ಸಮಾರೂಢಃ ವೇತ್ರಸ್ಯ ಸ್ಪರ್ಶನಾದಪಿ ||೫೪||

ದ್ವಾರಮುದ್ಘಾಟ್ಯ ತರಸಾ ಬಹಿರ್ಗತ್ವಾ ಮಹಾಮುನಿಃ ||
ವಟವೃಕ್ಷಮನುಪ್ರಾಪ್ಯ ನಿವಸನ್ ತಸ್ಯ ಕೋಟರೇ ||೫೫||

ಬಹಿರ್ದ್ವಾರಂ ಸಮಾಸಾದ್ಯ ಯೋಗಂ ದ್ವಾದಶವಾರ್ಷಿಕಂ ||
ಚಕಾರ ಶಿವ ನಿಷ್ಠಾತ್ಮಾ ಶಿಷ್ಯೈಕಕರಣಸ್ಸದಾ ||೫೬||

ತದ್ವೃಕ್ಷದ್ವಾರದೇಶೇ ದ್ವೌ ವ್ಯಾಘ್ರೌ ದೌವಾರಿಕಾವಿವ ||
ತಿಷ್ಠೇತಾಂ ದುಷ್ಟ ಮನುಜ ನಿಗ್ರಹಾರ್ಥ ಮಹೌಜಸಃ || ||೫೭||

ತತೋ ದ್ವಾದಶವರ್ಷಾಂತೇ ಬಹಿರ್ನಿರ್ಗತ್ಯ ವೃಕ್ಷಸಃ ||
ತಸ್ಮಿನ್ ಸ್ಥಾನೆ ಮಹಾಪುಣ್ಯೇ ತಿಂತ್ರಿಣೀ ವೃಕ್ಷ ಮೂಲತಃ ||೫೮||

ಶಿವಲಿಂಗಂ ಪ್ರತಿಷ್ಠಾಪ್ಯ ವಾಪೀ ಚೈವ ಚಕಾರಸಃ ||
ಭೋಜನಂ ಬ್ರಾಹ್ಮಣಾನಾಂತು ಚಕಾರ ಬಹುಶೋವಶೀ ||೫೯||

ಕ್ಷೀರಾಪೇಕ್ಷಾ ಬ್ರಾಹ್ಮಣಾನಾಂ ಭೋಕ್ತೃಣಾಂ ಜ್ಞಾನಚಕ್ಷುಷಾಂ ||
ಜ್ಞಾತ್ವಾ ಪುರಸ್ಥಿತಂ ವೃಕ್ಷಂ ಕ್ಷೀರಂ ದೇಹೀತ್ಯಚೋದಯೇತ್ ||೬೦||

ತದಾ ಕ್ಷೀರಂ ತಿಂತ್ರಿಣೀತಃ ಪ್ರಸುಸ್ರಾವ ಪ್ರವಾಹವತ್ ||
ತದಾರಭ್ಯ ಮಹಾಯೋಗೀತ್ಯಖಿಲಾಃ ಪಶಶಂಸಿರೆ ||೬೧||

ತದ್ಗ್ರಾಮೇ ದುಷ್ಟ ಮನುಜಾ ಕಿರಾತಾದ್ಯಾ ದುರಾಶಯಃ ||
ಐಂದ್ರಜಾಲಿಕ ಏವಾಯಮಿತಿಮತ್ವಾ ಮಹಾಬಲಾಃ ||೬೨||

ಸುಧಾಪಾಷಾಣ ಗೋಣ್ಯಾಂತು ಸ್ಥಾಪಯಿತ್ವಾ ದುರಾಶಯಃ ||
ವಾಪಿಕಾಯಾಂ ಚಿಕ್ಷಿಪುಸ್ತಂ ಶಿವಯೋಗೀನಮುದ್ಭ್ರತಂ ||೬೩||

ತತ್ರಸ್ಥಿತ್ವಾಪ್ಯಸೌಧ್ಯಾನಂ ನ ಜಹೌ ಪಾರ್ವತೀಪತೇಃ ||
ತಸ್ಯಾನುಕಂಪಾ ಮಹಾತ್ಮ್ಯಾತ್ ಯಥಾವತ್ ಸ್ಥಿತ ಏವಸಃ ||೬೪||

ಲೋಕಸ್ಯ ಸಂಪರ್ಕಂ ತ್ಯಕ್ತ್ವಾ ಗ್ರಾಮಾದ್ವಿನಿರ್ಯಯೌ ||
ಹನಸೀಗ್ರಾಮಮಭೇತ್ಯ ಗ್ರಾಮಾಧೀಶಮಯಾಚತ ||೬೫||

ಜನಸಂಪರ್ಕರಹಿತಂ ತಪಸೇ ಸ್ಥಾನಮುತ್ತಮಂ ||
ಗ್ರಾಮಸ್ವಾಮೀ ತದಾಪ್ರಾಹ ಸೋಪಹಾಸಕರಂ ವಚಃ ||೬೬||

ಮೃತ್ತಿಕಾ ಪೂರಿತಂ ದೃಷ್ಟ್ವಾ ಕುಸಂದಂ ಪುರತಸ್ಥಿತಂ ||
ಕುಸಂದಂ ಚಲಿತೆ ಯಾವತ್ತಾವದ್ದಾ ಶಾಮಿತೇಸ್ಥಲಂ ||೬೭||

ಇತ್ಯುಕ್ತವತಿ ಗ್ರಾಮೇಶೆ ಚಲಂತಂ ಮುನ್ಯನುಜ್ಞಯಾ ||
ಅತೀತ ಗ್ರಾಮ ಸೀಮಾಂಚ ಗಚ್ಛಂತಂ ವಾತರಂಹಸಾ ||೬೮||

ಅಭೂತಪೂರ್ವಂ ದೃಷ್ಟ್ವಾಸೌ ಪೌರಜಾನ ಪದೈಃಸಹ ||
ಗ್ರಾಮಾಧ್ಯಕ್ಷೋ ಮಹಾಮಾನಿ ವೇಪಮಾನಃ ಕೃತಾಂಜಲಿಃ ||೬೯||

ಕ್ಷಮಸ್ವ ಮಮದೌರಾತ್ಮ್ಯಂಸ್ವಾಮಿನ್ ಶ್ರೀಯೋಗಿನಾಂವರ ||
ತ್ವತ್ಪ್ರಭಾವ ಮಜಾನಂತಂ ಅನುಗ್ರಹೀಷ್ವ ಮಾಂ ವಿಭೋ ||೭೦||

ತ್ರೈಪಾದಿಕಂ ಭೂಮಿದಾನಂ ಬಲೇರ್ಗರ್ವಂ ಯಥಾಹರತ್ ||
ತಥಾ ಕುಸಂದ ಗಮನಂ ಮಮ ಗರ್ವೋಗತಃ ಖಲು ||೭೧||

ಇತ್ಯುಕ್ತಃಪ್ರದದೌ ತಸ್ಮೈ ಕುಸಂದಾಕ್ರಾಂತ ಭೂಮಿಕಂ||
ಕುಸಂದ ವೃತ್ತಿರದ್ಯಾಪಿ ತದ್ವಂಶ್ಯೈಪರಿಭುಜ್ಯತೆ ||೭೨||

ತದ್ಭೂಮ್ಯಾಂ ಶಿವಲಿಂಗಂತು ಪ್ರತಿಷ್ಠಾಪ್ಯ ಶಿವಾಲಯಂ ||
ಚಕಾರ ಶಿವಪೂಜಾಂಚ ತಪಶ್ಚ ಮದದ್ಭುತಂ ||೭೩||

ಲಕ್ಷ್ಮ್ಯಂಬಾನಾಮ ತತ್ಪತ್ನೀ ಸಾಧ್ವೀಗುಣಸಮನ್ವಿತಾ ||
ತ್ರಿಸ್ತಃ ಪುತ್ರಿನ್ ಪ್ರಸುಷುವೆ ಚತುರ್ಥಂ ಶಿವನಾಮಕಂ ||೭೪||

ಶಿವಗಂಗಾಜ್ಯೇಷ್ಠಪುತ್ರೀವಾಪಿಮಜ್ಜನತಃ ಕಿಲ ||
ಪ್ರಾಣಾನ್ ಜಹೌ ತದಾ ಮಾತಾ ಚಕಾರ ಪರಿವೇದನಂ ||೭೫||

ತಾಂ ಪುತ್ರೀಂ ಯೋಗಿವರ್ಯಾಗ್ರೇ ನಿಧಾಯ ಪರಿವೇದ ||
ತತೋಪ್ಯಯಂ ನಿರ್ವಿಕಾರೋ ಕಿಮೇತದಿತಿಚಾಬ್ರವೀತ ||೭೬||

ಸ ಪ್ರಾಹಮೃತ ಪುತ್ರೀಂ ತಾನುಜ್ಜೀವ ಕೃಪಾನಿಧೇ ||
ಇತ್ಯುಕ್ತಃ ಸ ದಯಾಲುಸ್ತಾಂ ಪ್ರಾಹ ಪತ್ನಿಮನಿಂದಿತಾಂ ||೭೭||

ಜೀವೇದಿಯಂ ಶಂಭುಕೃಪಾದಪಿ ಲೋಕಪಥಂ ತ್ಯಜೇತ್ ||
ತಥೈವ ಜೀವತು ಸುತಾ ಮುಮೇತ್ಯಭ್ಯಾಹಿತಾಮಯಾ ||೭೮||

ತಾಂ ಸುತಾಂ ಜೀವಯಾ ಮಾ ಸಯೋಗಶಕ್ತ್ಯಾ ಮಹಾತಪಾಃ ||
ಮಹಾತ್ಮ್ಯಂ ತಸ್ಯ ದೃಷ್ಟ್ವಾಪಿ ಪೌರಜಾನಪದಾಶ್ಚಯೇ ||೭೯||

ಕುತೂಹಲ ಸಮಾಯುಕ್ತಾಃ ಭಕ್ತಿನಮ್ರಾ ಬಭೂವಿಶೀ ||
ಮೃತಂ ಮೃತಂ ಸಮಾನೀಯ ಹ್ಯಾಗತಾಜೀಪಿತೇಚ್ಛಯಾ ||೮೦||

ತತೋ ಧ್ಯಾನಂ ಪರಿತ್ಯಜ್ಯ ಜಗಾಮ ಗಿರಿಮುತ್ತಮಂ ||
ಮಲ್ಲಿಕಾರ್ಜುನ ನಾಮಾಖ್ಯಂ ನಿರ್ಜನಂ ಯೋಗಿ ಸೇವಿತಂ ||೮೧||

ಬಿಲ್ವವೃಕ್ಷ ಸಮಾಕೀರ್ಣಂ ತಪಃಸ್ಥಾನಂ ಸಮಾವಿಶತ್ ||
ತತ್ರ ಲಿಂಗಂ ಪ್ರಸಿಷ್ಠಾಪ್ಯ ಗುಹಾಯಾಂ ನಿವಸನ್ಸುಧೀಃ ||೮೨||

ದೇವಖಾತ ಜಲೇ ಸ್ನಾತ್ವಾ ಬಿಲ್ವೈರಭ್ಯರ್ಚಯನ್ ಶಿವಂ ||
ತಪಶ್ಚಕ್ರೇ ಮಹಾಯೋಗಿ ಭಸ್ಮರುದ್ರಾಕ್ಷಭೂಷಣಃ ||೮೩||

ನಿರ್ಜನೇ ಪರಮಾನಂದಃ ಶಿವಧ್ಯಾನ ಪರಾಯಣಃ ||
ತತ್ರಾಪ್ಯಷ್ಟಾಂಗ ನಿರತಃ ಶಿವಪಂಚಾಕ್ಷರಂ ಜಪನ್ ||೮೪||

ಬಹುಕಾಲಂ ತಪಶ್ಚಕ್ರೇ ಸಮಾಧೇ ಪಾರವಶ್ಯತಃ ||
ತತ್ಪರ್ವತೆ ಭಸ್ಮರಾಸಿ ಸಾಕ್ಷಾತ್ಕೃತ್ಯ ಶಿವಾಜ್ಞಯಾ ||೮೫||

ಭಕ್ತೇಭ್ಯೋ ದರ್ಶಯಾಮಾಸ ಲೋಕೋಪಕೃತಿಹೇತವೇ ||
ಯಸ್ಯ ಭೂತೇಸ್ತು ಸಂಸ್ಪರ್ಶಾತ್ ಪಿಶಾಚ ಬ್ರಹ್ಮರಾಕ್ಷಸಾಃ ||೮೬||

ತತಃಕಾಲೇನ ಮಹತಾ ನಾದಬಿಂದು ಕಲಾತ್ಮಕೆ ||
ಶಿವೇ ಚಿತ್ತಂ ಸಮಾಧಾಯ ತಪಃಸ್ತೇಪೆ ಮಹಾಮುನಿಃ ||೮೭||

ತತಃಕಾಲೇನ ಮಯತಾ ವೇಣುಪಲ್ಲೀ ಸಮೀಪಗಃ ||
ದೇವತಾ ಯತಿ ರೂಪೇಣ ಬಿಷ್ಟೇಶಂದ್ರಷ್ಟುಮಾಗತಃ ||೮೮||

ವಿಠ್ಠಲಾಖ್ಯೇ ನೃಸಿಂಹಶ್ಚ ಶ್ರೀರಾಮೇಶ್ವರ ಸಂಜ್ಞಕಃ ||
ನಾರಾಯಣ ಸೋಮನಾಥೋ ಮಲ್ಲಿಕಾರ್ಜುನ ಶಂಕರೌ ||೮೯||

ಪ್ರಯಾಗ ಮಾಧವಶ್ಚೈವ ಪ್ರೇತಮೋಚನ ದೇವತಾ ||
ಪೂರ್ವೋಕ್ತ ದೇವತಾ ಸ್ಥಾನಂ ಮ್ಲೇಂಛೈಃ ಪೂರ್ವಂ ವಿನಾಶಿತಂ || ||೯೦||

ತುಂಗಭದ್ರಾಂ ಪ್ರವಿಷ್ಟಾಸ್ತತ್ ತ್ಯಕ್ತ್ವಾ ಸ್ಥಾನಮನುತ್ತಮಂ ||
ಧೃತ್ವಾರೂಪಂ ಯತೀನಾಂತೇ ಮಲ್ಲಿಕಾರ್ಜುನ ಪರ್ವತಂ ||೯೧||

ದೃಷ್ಟ್ವಾ ತತ್ರ ಸಮಾಸೀನಂ ಶ್ರೀಲಿಂಗಾರ್ಚನತತ್ಪರಂ ||
ಭಸ್ಮೋದ್ಧೂಳಿತ ಸರ್ವಾಂಗಂ ರುದ್ರಾಕ್ಷಾಂಕಿತ ಕಂಕಣಂ ||೯೨||

ಸಮಾಧಿಗತಸಚ್ಚಿತ್ತಂ ನಾಸಾಗ್ರನ್ಯಸ್ತಲೋಚನಂ ||
ಶಿವಧ್ಯಾನೈಕನಿರತಂ ನಂದೀಶಮಿವಶಂಕರಂ ||೯೩||

ಆಲೋಕ್ಯ ಮುದಿತಾಸ್ತಾಶ್ಚ ದೃಷ್ಟ್ವಾ ಬಿಷ್ಟೇಶ್ವರೋಯತಿಃ ||
ಜ್ಞಾತ್ವಾ ತೇಷಾಂ ಮನೋಭಾವಂ ಕೃತಾತಿಥ್ಯನ್ ಸುಷುಪ್ತಕಂ ||೯೪||

ಕಿಮಾಗಮನ ಕೃತ್ಯಂವೋ ಇತಿ ಪೃಷ್ಟ್ವಾಯತೀಶ್ವರಃ ||
ಸ್ವಸ್ಥಾನ ಚ್ಯುತಿ ಮಾಖ್ಯಾನೆಂ ತ್ವಮೆವೋದ್ಧರ್ತುಮರ್ಹಸಿ ||೯೫||

ಅಸ್ಮಾಕಂ ಸ್ಥಾನಮುಖ್ಯಾನಿ ಸಿಥಿಲಾನಿ ದುರಾತ್ಮಭಿಃ ||
ಮಹಾಕ್ಷೇತ್ರಂ ಸಮಾವಸ್ಯಲೋಕೇ ಖ್ಯಾತಿಂ ಕರಿಷ್ಯಸಿ ||೯೬||

ಶಿವಪ್ರೀತಿರನೇನೈವ ಮಹಾತಿತೇ ಭವಿಷ್ಯತಿ ||
ಇತಿ ತತ್ಪ್ರಾರ್ಥನಾಂ ಶೃತ್ವಾ ಪಂಚಪ್ರಾಡ್ರೂಪಧಾರಿಭಿಃ || ೯೭||

ಪುರಂ ರಂಗಾಭಿದಂ ಪ್ರಾಪ್ಯ ನೃಸಿಂಹಕ್ಷೇತ್ರಮುತ್ತಮಂ ||
ದೇವಾಲಯೋ ತಪಸ್ತೇಪೆ ನೃಸಿಂಹಸ್ಯ ಶಿವಾಜ್ಞಯಾ ||೯೮||

ತತಸ್ತದ್ಗ್ರಾಮಪೋಭೂತ್ವಾ ಸತ್ಯಬೋಧೋಯತೀರ್ಯದಾ ||
ನೃಸಿಂಹಾಲಯಗೋಭೂತ್ವಾ ಬಿಷ್ಟೇಶಂ ಶೈವರೂಪಿಣೀಂ ||೯೯||

ಬಹಿರ್ನಿಸ್ಸಾರಯಾಮಾಸ ಸೋಪಿತ್ಯಕ್ತ್ವಾ ಸ್ಥಲಾಂತರಂ ||
ಗ್ರಾಮಾದ್ಬಹಿಃ ಸಮಾಗತ್ಯ ತಸ್ಥೌ ಗೋಷ್ಠೇ ಯದೃಚ್ಛಯಾ ||೧೦೦||

ತದಾತದ್ಯತಿನೋದಂತಿ ನೇತ್ರಾಂಧತ್ವಾ ಸಮಾಯಯೌ ||
ತಂ ದೃಷ್ಟ್ವಾ ಸಯತಿಃ ಕೋಸೌವಿತಿಶ್ಶಿಯಾನ ಪೃಚ್ಛತಿ ||೧೦೧||

ತಮೂಚುರಯು ಮೇಕಾಕೀ ನೃಸಿಂಹಾಲಯುಗೋಭವತ್ ॥
ಭವದ್ವಾಸಾರ್ಥಮತ್ರೈವ ಬಹಿರ್ನಿಷ್ಕಾಸಿತಾವಯುಂ ತೋಭವತ್ ॥೧೮೨॥

ಭಸ್ಮಮಂಡಿತ ಸರ್ವಾಂಗಃ ರುದ್ರಾಕ್ಷಾಭರಣೈರ್ಯುತಃ ॥
ಯತಿರಭ್ಯಾವದತ್ ತಾನ್ ಸ್ವಾನ್ ಮಹಾಯೋಗಿ ಭವೇದಯುಂ ॥೧೦೩॥

ಯಾಚಧ್ವಂ ಗಜನೇತ್ರಾರ್ಥಂ ಭಸ್ಮಸಂದೀಯತಾಯಿತಿ ॥
ತೇ ಪ್ರಣಮ್ಯತು ಬಿಷ್ಟೇಶಮರಾಧಂ ಕ್ಷಮುಸ್ವಭೋಃ ॥೧೦೪॥
ಗಜಾಂಧಕಾ ನಿರಾಸಾರ್ಥಂ ಭಸ್ಮಾಸ್ಮಭ್ಯಂ ಪ್ರಯಚ್ಛಭೋ ॥
ಇತಿ ಮಾಧ್ವೈಃ ಪ್ರಾರ್ಥಿತಃ ಸನ್ ಭಸ್ಮದತ್ವಾಂ ಗಜಾಂಧತಾ॥೧೦೫॥
ನಿವಾರಯಾಮಾಸ ತದಾ ತನ್ಮಹಾತ್ಮ್ಯಂ ಪ್ರಶಂಸಿರೆ ॥
ತತ್ರ ಗೊಷ್ಠೇ ಕಿರಾತಂತು ದೃಷ್ಟ್ವಾ ಬಿಷ್ಟೇಶ್ವರೋ ಮುನಿಃ ॥೧೦೬॥
ವಾಸಾರ್ಥಂ ದೇಹಿಮೆ ಸ್ಥಾನಂ ಅತ್ರೇತಿ ತಮುವಾಚಹ ॥
ಸೋಪ್ಯಾಹ ಪುತ್ರೋಜಾತ್ಯಂಧೋ ಮಮ ನೇತ್ರಯುತೋಭವೇತ್ ॥೧೦೭॥

ಯದಿತಾವತ್ ಸ್ಥಲಂ ದಾಸ್ಯೆ ಸೇವಾಮಪಿ ಕರೋಮ್ಯಹಂ ॥
ಇತಿ ತದ್ವಚನಂ ಶ್ರುತ್ವಾ ತವ ಪುತ್ರ ಮಿಹಾನಯ ॥೧೦೮॥
ಇತ್ಯುವಾಚ ತದಾ ಸೋಪಿ ಪುತ್ರಂ ತತ್ರಾಹ್ವಯತ್ ಸ್ವಕಂ ॥
ದೃಷ್ಟ್ವಾ ಜಾತ್ಯಂಧ ಮಿತಂ ಸ್ವಮಹಾತ್ಮ್ಯ ಚಿಕೀರ್ಷಯಾ ॥೧೦೯॥
ಭಸ್ಮದದಾವಂಧಕಾಯ ಸತುನೇತ್ರ ಯುತೋಭವತ್ ॥
ತದಾಶ್ಚರ್ಯಂ ನಿವೇದ್ಯಾಥಾರಾಜ್ಞೇ ತಸ್ಯಾಜ್ಞಯಾ ದದೌ ॥೧೧೦॥
ಸಗೋಷ್ಠಭೂಮೌ ತತ್ರಾಸೌ ನಿವಾಸಮಕರೋತ್ತದಾ ॥
ತದ್ಗೋಷ್ಠಾಧಃ ಶಿವಗೃಹಂ ಲಿಂಗಂ ರಾಮೇಶ್ವರ ಸಂಜ್ಞಿತಂ ॥೧೧೧॥
ಖನಿತ್ವಾ ದರ್ಶಯಾಮಾಸ ಸರ್ವೇಷಾಂ ಪಶ್ಯತಾಂ ನೃಣಾಂ ॥
ತಸ್ಯ ಲಿಂಗಸ್ಯ ಪೂಜಾಂಚ ಯಥಾವತ್ಕುರುತೇನಿಶಂ ॥೧೧೨॥

ನೃಸಿಂಹಸ್ಯಾಲಯೇ ಶಾಲಾಂ ಶೈಲಿಂ ಚಕ್ರೇ ಮಹಾತಪಾಃ ||
ತತೋ ರಾಮೇಶಾಲಯಂಚ ವಿಸ್ತಾರಂ ಸ ಚಕಾರಹ ||೧೧೩||

ರಾಮೇಣ ಸ್ಥಾಪಿತಂ ಲಿಂಗಂ ಪೂರ್ವಂ ತ್ರೇತಾಯುಗೇ ಕಿಲ ||
ತತೋ ವೇಣುಪುರಿಂ ಗತ್ವಾಽಶ್ವತ್ಥನಾರಾಯಣಂ ತಥಾ ||೧೧೪||

ಪ್ರತಿಷ್ಠಾಪ್ಯ ಶಿಲಾಗೇಹೆ ಮಂಟಪಂಚ ವಿಧಾಯಚ ||
ತುಂಗಭದ್ರಾತಟೇ ಸ್ಥಾನೇನಾಯಣ ಪುರೋಭುವಿ ||೧೧೫||

ನಿಶ್ರೇಣಿಂ ಕಾರಯಾಮಾಸ ಶೈಲಿಂ ಜನಹಿತಾಯ ಸಃ ||
ವಿಠ್ಠಲೇಶಂ ಪ್ರತಿಷ್ಠಾಪ್ಯಂ ವಿಠ್ಠಲಾಖ್ಯೇ ಮಹಾಪುರೆ ||೧೧೬||

ಸೋಮೇಶಂ ಸ್ಥಾಪಯಾಮಾಸ ವೇಣುಪಲ್ಯಾಃ ಶಿವಾಲಯೇ ||
ಶಿಲಾಮಯಂ ಮಂಟಪಂಚ ತತ್ರ ಚಕ್ರೇ ಶಿವಾಜ್ಞಯಾ ||೧೧೭||

ತತೋ ರಂಗಪುರೆ ರಾಮಲಿಂಗಾಯ ನಿವಾಸಕಃ ||
ಗಳಗೇಶ ಪುರಂಗತ್ವಾ ನದ್ಯಾಂ ಸೋಪಾನ ಮಾಪ್ಯಸೌ ||೧೧೮||

ಕಾರಯಿತ್ವಾ ತುಂಗಭದ್ರಾ ನದೀ ಮಧ್ಯೆ ಮಹಾಶ್ರಯಂ ||
ಚವನಸ್ಯ ಮುನೇರ್ದೃಷ್ಟ್ವಾ ತತ್ರ ಲಿಂಗಂ ಶಿವಾತ್ಮಕಂ ||೧೧೯||

ಸ್ಥಾಪಯಿತ್ವಾ ಪುನಃ ಪ್ರಾಗಾತ್ಪುರಂ ಸಮಾವಿವೇಶಹ ||
ನಿವಾಸ ಮಕರೋತ್ಕಿಂಚಿತ್ ಕಾಲಮೇಕಾಂತವಾಸಯುತ್ ||೧೨೦||

ತತಃ ಸಪುತ್ರಂ ಶಿವನಾಮಕಂ ತದಾ ಸಮೀಪಮಾನೀಯ ||
ಸಚಿಂತಯಾ ಸಃ ದ್ವಿಜತ್ವ ಸಂಸ್ಕಾರಯುತಂ ಚಕಾರವಾನ್
ಸೋಪ್ಯಗೃಹಿತದ್ವ್ರತ ಮುತ್ತಮಂ ತಥಾ ||೧೨೧||

—ಇತಿ ಶ್ರೀ ಬಿಷ್ಟೇಶಾಖ್ಯಾನೇ ಪ್ರಥಮಃ ಸರ್ಗಃ ಸಮಾಪ್ತಃ—

## ಅಥ ಶ್ರೀ ಬಿಷ್ಟೇಶಾಖ್ಯಾನೇ ದ್ವಿತೀಯ ಸರ್ಗ ಪ್ರಾರಂಭಃ

ತತೋ ವೇಣುಪುರೀ ಸಂಸ್ಥೋ ದೈವಜ್ಞ ಶ್ಯಚ ಕನ್ಯಕಾಂ ॥
ಶ್ರಿವೇಣ್ಯಂಬಾಂ ಶಿವಾಯಾದಾತ್ ಬ್ರಾಹ್ಮೇಣ ವಿಧಿನಾತದಾ ॥೧॥

ತಸ್ಮಿನ್ಕಾಲೇದ್ವ್ಯಪತ್ಯಕಾ ಶೂದ್ರೀಸೇವಾಪರಾಭವತ್ ॥
ಶಿವಾಲಯಸ್ಯ ಧೂಳೀವಾಂ ಸಮ್ಮಾರ್ಜನ ಕರೀ ಸ್ಥಿರಾ ॥೨॥

ತಸ್ಯ ಜ್ಯೇಷ್ಠ ಸುತೋಽಸ್ತ್ಯಂಧಃ ಕನಿಷ್ಠ ಸ್ತು ಸುಲೋಚನ ॥
ಬಹುಕಾಲಂ ಸೇವಯಾಸೌ ಸಂತೋಷ್ಯಯುವಿನಾಂವರಂ ॥೩॥

ಕೃಪಾಂ ಕುರು ಮಯಸ್ವಾಮಿನ್ ಇತಿ ವಾಚಾಬ್ರವೀದಮುಂ ॥
ತಚ್ಛೃತ್ವೇದಂ ಬಿಷ್ಟೇಷಾರ್ಯಃ ಸುತಮೇಕಂ ದದಸ್ವಮೇ ॥೪॥

ಇತ್ಯುಕ್ತ್ವಾ ಸಾಸುತಂ ಜ್ಯೇಷ್ಠ ಜಾತ್ಯಂಧಂಚ ಸಮರ್ಪಯತ್ ॥
ತಮೇವ ಲೋಚನಯುತಂ ಚಕ್ರೇ ಬಿಷ್ಟೇಶಯೋಗಿರಾಟ್ ॥೫॥

ಸಶೂದ್ರೋಽಪಿ ತದಾಜ್ಞಾಂವೈ ಪಾಲಯನ್ ಶಿಷ್ಯತಾಂಗತಃ ॥
ಗೋಣೆಪ್ಪಯ್ಯ ಇತಿ ಖ್ಯಾತೋ ಮಹಾಪುರುಷ ತಾಂ ಗತಃ ॥೬॥

ತದಾ ಬಿಷ್ಟೇಶ್ವರೋ ಯೋಗೀ ಗುರುದರ್ಶನಕಾಂಕ್ಷಯಾ ॥
ನದೀಪಾರಂ ಜಗಮಿಷುಃ ಕರ್ಣಧಾರಾನಪೇಕ್ಷಯನ್ ॥೭॥

ನದೀಂ ತೀರ್ತ್ವಾ ಪ್ರಯಾತ್ಯೇವ ಚ್ಯವನಸ್ಯಾಶ್ರಮಂ ಪ್ರತಿ ॥
ಸಗೋಣೀ ಕಂಬಲೇ ಸ್ಥಿತ್ವಾ ನದೀಂ ತರತಿ ನಿತ್ಯಶಃ ॥೮॥

ಏವಂ ಸೇವಾಪರೊ ಗೋಣೀ ಕಿಂಚಿತ್ಕಾಲಂ ಶತದಾಜ್ಞಯಾ ॥
ಸ್ವಜಾತೀಯಾನ್ಸ್ವಭೃತ್ಯಾನನುಗ್ರಹ್ಯ ಮಠೇ ಸ್ಥಿತಃ ॥೯॥

ಕದಾಚಿದ್ಗೋಣಿ ನಾಮಾಸೌ ವ್ಯಾಘ್ರಮಾರುಹ್ಯದರ್ಪಿತಃ ॥
ಕರೌ ಭುಜಂಗಮಂ ಕೃತ್ವಾ (ಧೃತ್ವಾ)ಯೋಗಶಕ್ತಿಂ ಪ್ರದರ್ಶಿತುಂ ॥೧೦॥

ಗುರುದರ್ಶನ ಕಾಮ ಸನ್ನಾಯಾತೀತಿ ಜನಾಜಗುಃ ॥
ತದಾ ಬಿಷ್ಟೇಶ್ವರೋ ಯೋಗಿ ಸಕುಡ್ಯೆ ಸಮವಸ್ಥಿತಃ ॥೧೧॥

ತದ್ದರ್ಶನಾಯತಂ ಕುಡ್ಯಂ ಚೋದಯಾಮಾಸ ವೇಗತಃ ||
ಕುಡ್ಯಾರೂಢಂ ತದಾ ದೃಷ್ಟ್ವಾ ಬಿಷ್ಟೇಶಂ ಗೋಣಿನಾಮಕಃ ||೧೨||
ಲಜ್ಜಾಯುಕ್ತೋ ಯೋಗವರ್ಷಂ ಜಹೌ ಸೇವಾ ಪರಾಯಣಃ ||
ಇತ್ಯಾದಾಶ್ಚರ್ಯಜಾಲಂತು ದೃಷ್ಟ್ವಾ ಲೋಕಾಸ ಕಂಪನಾಃ ||೧೩||
ತದಾಜ್ಞಾಧಾರಕಾ ಭೂತ್ವಾ ಶಿಷ್ಯತಂ ಪ್ರತಿಪೇದಿರೆ ||
ತತಃಕಾಲೇ ಪಯೋ ಕಾಲೇ ತುಂಗಭದ್ರಾಜಲೇಶುಭೆ ||೧೪||
ಶಿವತೀರ್ಥಸ್ಯನತಿದೂರೇ ಜಂಬುವೃಕ್ಷಸ್ಯ ಮೂಲತಃ ||
ಜಂಬುಕೇಶ್ವರ ಸಂಜ್ಞಂತಂ ಲಿಂಗಂ ಸಂಸ್ಥಾಪ್ಯ ಯತ್ನತಃ ||೧೫||
ತತ್ರೈವ ವಸತೇ ಕ್ವಾಪಿ ಜನಸಂಮರ್ದ ಶಂಕಯಾ ||
ಅಷ್ಟಾ ತೀರ್ಥಾನಿ ಗತ್ವಾಪಿ ತದುದ್ಧಾರಂ ಚಕಾರಸಃ ||೧೬||
ಏಕದಾ ಭಕ್ತಗೇಹೇ ತು ವಿವಾಹಂ ದೃಷ್ಟುಕಾಮಯಾ ||
ಗಚ್ಛೇತಿ ಚೋದಯಾಶ್ವೇನ ಪತ್ನಿದಾರಿದ್ರಶಂಕಯಾ ||೧೭||
ಯಾಚಿತೋ ವಸ್ತ್ರಭೂಷಾದಿ ತುಂಗಭದ್ರಾಜಲಾದ್ದದೌ ||
ಪೇಟಿಕಾಂ ಭೂಷಣಸ್ಯಾರ್ಥಸಮು ಧೃತ್ಯದದೌ ಕಿಲ || ||೧೮||
ಭಕ್ತ ವೈವಾಹಿಕಂ ಗೇಹೇ ಏತಂ ದೃಷ್ಟ್ವಾ ಜನೋಮಹಾನ್ ||
ಮಹಾಪುರುಷ ಇತ್ಯೇವಂ ತದಾಪಿ ಸಮಪೂಜಯತ್ ||
ಇತ್ಯಾದ ಚರ್ಯಂ ಕುರ್ವಾಣಃ ತದಾ ರಂಗಪುರೇವಸತ್ ||೧೯||
ಅಥ ಕಾಲೇನ ಕಿಯತಾ ಪಂಪಾಕ್ಷೇತ್ರಾಧಿಪೋ ಮಹಾನ್ ||
ಬಿಷ್ಟೇಶಂ ಬೋದ್ಧುಕಾಮಸ್ಸನ್ ಯತಿರೂಪೇಣ ಚಾಗತಃ ||೨೦||
ದೃಷ್ಟ್ವಾ ತಮುಗ್ರ ತೇಜೋಭಿರ್ದಹಂತ ಮಿವಪಾವಕಂ ||
ಪ್ರತ್ಯುತ್ಥಾನಮುಶ್ಚಕ್ರೇ ಬಿಷ್ಟೇಶಸ್ತ್ವತಿ ಭಕ್ತಿತಃ ||೨೧||
ಸದೇವಸ್ತಂ ಸಮುತ್ಥಾಪ್ಯ ದತ್ತಾಲಿಂಗನ ಮಂಗತಃ ||
ಉಪವೇಶ್ಯ ಸಪೈತೇನ ಸ್ವಸ್ಥಾನಮಗಮತಥಂ ||೨೨||
ತತಃ ಪ್ರವಿಶ್ಯ ಸ್ವಕ್ಷೇತಂ ಸ್ವಗರ್ಭಾಲಯಮಾವಿಶತ್ ||
ಬಧ್ವಾ ಕವಾಟಂ ಸಪ್ರಾಹನ್ಯಾಯಾನ್ ಬಹಿರದ್ಭುತರ ||೨೩||

ಅಂತರ್ಗತ ಮುದಾಖ್ಯೈನಂ ವಿರುಪಾಕ್ಷೇಶ್ವರಃಸ್ವಯಂ ॥
ಬಿಷ್ಟೇಶ ಮತ್ಪೂರ್ವಭಾಗೇಗೋಪುರಂ ಕುರುಭಕ್ತಿತಃ ॥೨೪॥
ಇತ್ಯುಕ್ತಃ ಸ ಶಿವಂಪ್ರಾಹ ನಾಸ್ತಿದ್ರವ್ಯಂ ಮಮಪ್ರಭೋ ॥
ಕಲಿಕಾಲೇ ಮಹಾಕೃತ್ಯಂ ಮಯಾಕಾರ್ಯಂಕಥಂಪ್ರಭೋ ॥೨೫॥
ಉವಾಚ ಶ್ರೀ ವಿರೂಪಾಕ್ಷಃ ಕಿಂ ಚಿಂತಯಸಿ ವತ್ಸಲ ॥
ತ್ವಮುದ್ಯೋಗಂ ಕುರು ತದಾ ವಿಶ್ವಕರ್ಮಾಣಮಾನಯ ॥೨೬॥
ತವಾಂತಿಕಂ ದ್ರವ್ಯನಿಧಿಂ ಕುಬೇರಮಪಿಚೋದಯ ॥
ಚಿಂತಾಂ ಮಾ ಕುರು ಮನ್ಮೂರ್ತೇತ್ವಮೇವಾಹಂ ನಚಾನ್ಯಥಾ ॥೨೭॥
ಇತ್ಯನುಗ್ರಹಿತಸ್ತಸ್ಯ ತನ್ಮಯಃ ಸ ಬಭೂವಹ ॥
ತಧ್ಯಾನಾರೂಢಚಿತ್ತಸ್ಸನ್ಪೂರ್ಣತೇಜಾಮಹಾನಭೂತ್ ॥೨೮॥
ತತೋಽಷ್ಟಮೇನ್ಹಿ ತದ್ವಾರಂ ಸ್ವಯಮೇವ ವ್ಯಶೀರ್ಯತ ॥
ಬಹಿರ್ನಿರ್ಗತ್ಯ ಬಿಷ್ಟೇಶಃ ಪೂರ್ವದ್ವಾರಂ ವ್ಯಲೋಕಯತ್ ॥೨೯॥
ತದಾತದ್ಗೋಪುರಸ್ಥಾನಮಾಗತ್ಯ ಮನಸಾಪುನಃ ॥
ಸಸ್ಮಾರ ವಿಶ್ವಕರ್ಮಾಣಂ ಸಚ ಮಾನುಷ ರೂಪಧೃತ್ ॥೩೦॥
ನನಾಮಾಗತ್ಯ ತಸತ್ಪಾದೌತಮಾಶಿರ್ಭಿಃಪ್ರಸಾದ್ಯಚ ॥
ಉತ್ತಿಷ್ಠ ವತ್ಸ ಶ್ರೀದ್ವಾರೆ ಗೋಪುರಂ ಕುರು ಸುಂದರಂ ॥೩೧॥
ಇತ್ಯುಕ್ತಃ ಸತತೋತ್ಥಾಯ ಸ್ವಾಮಿನ್‌ತವಕೃಪಾಯದಿ ॥
ಯಥಾಶಕ್ತಿ ಕರಿಷ್ಯಾಮೀತ್ಯಖಿಲಾನ್‌ಸ್ವಸ್ಯಕಿಂಕರಾನ್ ॥೩೨॥
ಮಾನುಷಾಂ ವಿಧಾಯಾಂಯದೌ ಸ್ಥಲ ಶೋಧಂ ಚಕಾರಸಃ ॥
ತದಾಜಲಪ್ರಮಾಣಂತು ಭೂಮಿಂಖನತಿಯತ್ನತಃ ॥೩೩॥
ತದಾ (ಹೇಮ) ಲೋಹಮಯಂಪಾತ್ರಂ ಅದೃಶ್ಯತ ಭುವಿ ಸ್ಥಿತಂ ॥
ಬಿಷ್ಟೇಶೋಽಪಿಚ ತಂದೃಷ್ಟ್ವಾ ಪಾತ್ರಂ ವ್ಯತ್ನಯಮುದ್ಧರ ॥೩೪॥
ಇತ್ಯುವಾಚ ತದಾಜ್ಞಾಂವೈ ತತ್ಸಮುದ್ಧರದಾಶುಸಃ ॥
ಯೋಗಿನೌ ತದಧೋಭಾಗೆ ನಾಸಾಗ್ರನ್ಯಸ್ತಲೋಚನೌ ॥ ೩೫ ॥

ದೃಷ್ಟ್ವಾತಂ ನಿಕಟಂಪ್ರಾಪ್ಯ ಬಿಷ್ಟೇಶಃ ಸಮುತ್ತಿಷ್ಠತಃ ॥
ತಂದೃಷ್ಟ್ವಾ ಬಹಿರಾಭಾಸೌಯೋಗಿಸೌಪರ್ಯಪೃಚ್ಛತುಃ ॥೩೬॥

ಭೋವತ್ಸರಾಸುಚಂದ್ರೋಪಿ ಭಾರ್ಯಾಹರಣ ಕರ್ಶಿತಃ ॥
ಜಾನಕೀಂ ಪ್ರಾಪ್ಯಮುದಿತೋಭವದ್ವಾಽತ್ರೈವ ತಿಷ್ಠತಿ ॥೩೭॥

ಬ್ರೂಹ್ಯೇತಸ್ಯೋತ್ತರಮಿತಿತಾಭ್ಯಾಂ ಪೃಷ್ಟೋಹ್ಯಯಂಪುನಃ ॥
ಉವಾಚಸ್ವಾಮಿಸೌಕಾಲೋಮಹಾನಪಿ ತತೋಭವತ್ ॥೩೮॥

ರಾಮಸ್ಯಸೀತಸ್ತ್ರೇತಾಯಾಂದ್ವಾಪರೋಪಿಯುಗೋಗತಃ ॥
ಕಲಿರಪ್ಯಾಗತ ಇತಿತಾವೂಚೆ ಬಿಷ್ಟಯೋಗಿರಾಟ್ ॥೩೯॥

ತೌತು ಮಂದಸ್ಮಿತಂಕೃತ್ವಾ ತ್ವಮೇವ ಭಗವಾನ್ ಕಲಿಃ ॥
ಕುರ್ವಾಜ್ಞಾಂ ದೇವದೇವಸ್ಯ ಆನಾಮತ್ರೈವನಿಕ್ಷೇಪ ॥೪೦॥

ಇತಿ ತದ್ವಚನಂಶ್ರುತ್ವಾ ಬಿಷ್ಟೇಶೋಹೃಷ್ಟ ಪೂರಿತಃ ॥
ತಾವಧೋ ಭುವಿಕೃತ್ವಾ ಪಾತ್ರೇಣಾಚ್ಛಾದ್ಯ ತದ್ವಹಿಃ ॥೪೧॥

ಭೂಮಿಂ ಬಬಂಧ ಪಾಷಾಣೈಃ ದ್ವಾರದೇಶಂ ತಥಾಕರೋತ ॥
ಪ್ರಸನ್ನಾಖ್ಯ ವಿರುಪಾಕ್ಷಂ ಲಿಂಗಂ ಸಂಸ್ಥಾಪ್ಯ ಗೋಪುರಂ ॥೪೨॥

ಪ್ರಾರಂಭಯಾಮಾಸಮುನಿಃ ವಿರೂಪಾಕ್ಷಸ್ಯಪೂರ್ವತಃ ॥
ಶಿಲ್ಪಿಭ್ಯೋ ತದ್ಬಬಂಧೇತಿ ಭಸ್ಮದತ್ವಾಪುನಃ ಸ್ವಯಂ ॥೪೩॥

ಶಿಲ್ಪಿನಸ್ತು ದಿವಾಂತೇತು ಕರ್ಮಕರ್ತೃನರಾನಥೆ ॥
ಪಿಂಡೀಕುರು ತಪಾಂಸುಂಚಪಾಸ್ಯೋವೇತನಮಿತ್ಯಯಂ ॥೪೪॥

ಉವಾಚ ತೇಪಿಸರ್ವೇಪಿಪಾಂಸುಂಸಂಮುದ್ಯಹಸ್ತಯೋಃ ॥
ಯದಾತಿಷ್ಠಂಸ್ತದಾಯೋಗಿ ವೇತ್ರೇಣಾತಾಡಯದ್ರಜಃ ॥೪೫॥

ತದ್ರಜೋ ಮಧ್ಯೇ ಭಾಗೇತು ತದಾಯಾಸಾನುಸಾರತಃ
ದ್ರವ್ಯಂತಿಷ್ಠತ ತಲ್ಲಬ್ಧ್ವಾಭಕ್ತ್ಯಾ ತತ್ಕರ್ಮಕುರ್ವತೆ ॥೪೬॥

ಏವಂಗೋಪುರಬಂದೇತು ಪ್ರಾರಂಭೆ ದೈವಯೋಗತಃ ॥
ಪ್ರಥಮಾಭೂರ್ವಿಬದ್ಧಾಽಬ್ದಾದ್ವಿತಿಯಾಸಾಂತರಾಯಿಕಾ ॥೪೭॥

ತದ್ವಾಜ್ಞಾತ್ವಾರಂಗಪುರಃ ಸಂಸ್ಥೋಬಿಷ್ಟೇಶೋಜ್ಞಾನಲೋಚನಃ ||
ವಿರೂಪಾಲಯಂ ಪ್ರಾಪ್ಯ ಶ್ರೀಕಂಠಂ ಪರಿಪೃಷ್ಟವಾನ್ ||೪೮||

ದೇವದೇವೇಶ ಸರ್ವಜ್ಞ ತ್ವನ್ನಿರ್ದೇಶೇನ ಭಕ್ತಿಮಾನ್ ||
ಅಹಂ ಗೋಪುರ ನಿರ್ಮಾಣೆ ಸಮುದ್ಯಮಮಕಾರಿಷಂ ||೪೯||

ದ್ವಿತಿಯಾ ಭೂಃ ಸಾಂತರಾಯಾ ಕಿಂಕಾರಣ ಮಭೂದಿಯಂ ||
ಇತಿ ಸಂಪ್ರಾರ್ಥಿತೋದೇವೋ ಬಿಷ್ಟೇಶಂ ತಮುವಾಚಸಃ ||೫೦||

ಬಿಷ್ಟೇಶ ಗಣನಾಥಸ್ತು ತ್ವಯಂ ಸಪೂಜಿತೋ ಭವತ್ ||
ದುರ್ಗಾಂಬಾ ನಾರ್ಚಿತಾತಸ್ಮಾತ್ ತದ್ಭಂಗಂ ವಿಚಿಕೀರ್ಷತಿ ||೫೧||

ಮಚ್ಛರೀರಾರ್ಧ ಭಾಗಸ್ಥಾತವದೇಹಾರ್ಧಮಿಚ್ಛತಿ ||
ಇತಿತದ್ವಚನಂ ಶೃತ್ವಾ ಬಿಷ್ಟೇಶ ಸ್ತಂ ಪ್ರಣಮ್ಯಸಾ ||೫೨||

ಜ್ಞಾತಂದೇವ ತಥಾಕುರ್ವೇ ಇತಿಗರ್ಭಾಲಯಾದ್ಬಹಿಃ ||
ಆಗತ್ಯ ಮನಸಾಮೇನೇಪತ್ನಿಮಿಚ್ಛತ್ತಸೌಬಲಿಂ ||೫೩||

ಇತಿಕೃತ್ವಾಮತಿಂ ಪತ್ನಿಂ ಲಕ್ಷ್ಮ್ಯಂಬಾಂ ಪ್ರತಿಮಂಗಲಂ ||
ದ್ರವ್ಯಜಾಲಂ ಸವಸ್ತ್ರಂತು ಪ್ರೇಕ್ಷಯಾಮಾಸ ಯೋಗಿರಾಟ್ ||೫೪||

ತದಾರಂಗಪುರೇ ಸಂಸ್ಥಾಲಕ್ಷ್ಮ್ಯಂಬಾ ದೇವರೂಪಿಣೀ ||
ಮಂಗಲದ್ರವ್ಯಮಾಲೋಕ್ಯ ಪಾತಿವ್ರತ್ಯ ಪರಾಯಣಾ ||೫೫||

ಸುವಾಸೀನಿಃ ಸಮಭ್ಯರ್ಚ್ಯ ಭಕ್ಷ್ಯಭೋಜ್ಯಾದಿಭಿಸ್ತಥಾ ||
ಶೂರ್ಪದ್ವಂದ್ವಾನಿ ಸಫಲ ಮಾಂಗಲ್ಯವಸನಾನಿಚ ||೫೬||

ಸುವಾಸಿನಿಭ್ಯಸಂದತ್ವಾ ವಾಯನಾನಿ ಬಹೂನಿಚ ||
ತದಾ ಶಿವಶಿವೇತ್ಯುಕ್ತ್ವಾ ಸ್ಥೂಲ ದೇಹಂ ವಿಹಯಚ ||೫೭||

ಸೂಕ್ಷ್ಮದೇಹೇನ ಪಂಪಾಂಬಾ ವಿರುಪಾಕ್ಷೌಪ್ರಣಮ್ಯಚ ||
ಪತಿಪಾದೌ ನಮಸ್ಕೃತ್ಯಗೋಪುರಂಪ್ರವಿವೇಶಸಾ ||೫೮||

ತಾನ್ ದೃಷ್ಟ್ವಾಸರ್ವ ಜನತಾ ದಿವ್ಯಾಭರಣ ಸಂಯುತಾಂ ||
ನಮಸ್ಕೃತ್ಯಕ್ಷೇತ್ರಗತಾನ್ ತದಾಶ್ಚರ್ಯಂ ಮಹಾಜನಾಃ ||೫೯||

ತದಾಗೋಪುರಭೂಭಾಗೆ ಗೋಪುರಾಂಬೇತಿದೈವತಾಂ ||
ಪ್ರತಿಮಾರೂಪಿಣೀ ಭೂತ್ವಾಪೂಜಾಂ ಗೃಹ್ಣಾತಿಮಾನವೈ ||೬೦||

ತದಾಗೋಪುರ ಭೂಮಿಸ್ತು ದ್ವಿತೀಯಾ ಸುಸ್ಥಿರಾಭವೇತ್ ||
ತಮೇಕಾದಶ ಭೂಮ್ಯಂತಂ ಗೋಪುರಂ ಕುರು ಇತಿ ಪ್ರಭುಃ ||೬೧||

ಸಿಲ್ಪಿನಂತಂ ಸಮಾದಿಶ್ಯ ಭೂಯೋರಂಗಪುರಂಯಯೌ ||
ರಂಗಗ್ರಾಮೇ ತಸ್ಥಿವಾಸಂ ತಪಶ್ಯಂತಂ ನಿರಂತರಂ ||೬೨||

ಬಿಷ್ಟೇಶಾಖ್ಯಮುನಿಂದ್ರಷ್ಟುಂಕುತೂಹಲಸಮನ್ವಿತಃ ||
ಕಶ್ಚಿ ಲಿಂಗಧರೋಽಭಾಗಾತ್ ದೃಷ್ಟ್ವಾಂತಂ ಪುರತಸ್ಥಿತಂ ||೬೩||

ಮುನಿಂ ವಿಜ್ಞಾಪಯಾಮಾಸ ತ್ವಚ್ಛೇರ್ಥಂ ಸಮಾಗತಃ ||
ಮಮಾಜ್ಞಾಂ ದೇಹಿ ವಿಪ್ರರ್ಷೆದತ್ವಾಜ್ಞಾಧಾರಕಂ ಸದಾ ||೬೪||

ವಾಚಂ ಲಿಂಗಧರಸ್ಯಾಸ್ಯ ನಿಶಮ್ಯ ಪ್ರಮುದಾನ್ವಿತಃ ||
ಭೋ ಲಿಂಗಧಾರಿನ್ ತ್ವಶೂದ್ರಃ ಸದಾಮನ್ನಿಕಟೇವಸಃ ||೬೫||

ಬಹು ಕಾಲೇ ವ್ಯತೀತೇತು ಲಿಂಗಧಾರಿ ತದಂತಿಕೇ ||
ವಾಸಂ ಚಕಾರ ತಸ್ಮೈಸಃ ನಿಯೋಗಮಕರೋತ್ತದಾ ||೬೬||

ಪಂಪಾಕ್ಷೇತ್ರಂ ಮಹಾಪುಣ್ಯಂ ಪಾಪಘ್ನೇಲೋಕವಿಶ್ರುತಂ ||
ತತ್ಪ್ರಕಾರಿ ಮನೋಹಾರಿ ದ್ವಾರಗೋಪುರ ಮುನ್ನತಂ ||೬೭||

ತನ್ನಿರ್ಮಾಣಂ ಸಮಾರಭ್ಯಾ ವಿಚಾರಃ ಕ್ರಿಯತಾಂ ತ್ವಯಾ ||
ನಿರ್ಮಾಣ ಕರ್ಮಣೀ ರತಃ ವರ್ತಂತೆ ಶಿಲ್ಪಿನಸ್ತದಾ ||೬೮||

ಆಸನಾದಧಃ ಸ್ಥಿತಂ ದ್ರವ್ಯಂ ಗೃಹ್ಣಾತಿ ಸ್ವೇನ ಕರ್ಮಣಾ ||
ಇತ್ಯುಕ್ತೋ ತೇನ ಮುನಿನಾ ಲಿಂಗಾಂಗಿ ಭಕ್ತಿಮಾನ್ಸ್ವಯಂ ||೬೯||

ದ್ರವ್ಯಂ ಗೃಹೀತ್ವಾ ಕಿಂ ಕಾರ್ಯಂ ಬ್ರೂಹಿಮೆ ವದತಾಂವರ ||
ಲಿಂಗಾಂಗಿನಾ ತದಾ ಪೃಷ್ಟೋ ಬಿಷ್ಟೇಶೋ ಮುನಿಪುಂಗವ ||೭೦||

ಪ್ರೋವಾಚ ಪರಯಾ ಪ್ರೀತ್ಯಾ ತತ್ಸೇವಾ ತುಷ್ಟಮಾನಸಃ ||
ನಿರ್ಮಾಣಕರ್ಮನಿರತಾನ್ ಜನಾನುದ್ದಿಶ್ಯ ತದ್ಧನಂ ||೭೧||

ಗೃಹೀತ್ವಾ ವೇತನಾರ್ಥಂವೈ ದಾತವ್ಯಮಿತಿಮೇ ಮತಿಃ ||
ಪ್ರೋಕ್ತಸ್ತೇನೈವ ಲಿಂಗಾಂಗಿ ದ್ರವ್ಯಂ ಸ್ವಿಕೃತ್ಯ ಯತ್ನತಃ ||೭೨||

ಪಂಪಾಕ್ಷೇತ್ರಂ ಸಮಾಗತ್ಯ ದ್ರವ್ಯಂ ತೇಷಾಂ ಕರೇ ದದೌ ||
ಮಾಸಿ ಮಾಸಿ ಭೃತಂದತ್ವಾ ಪುನರ್ನಿಕಟಮಾಗತಃ ||೭೩||

ಸ್ವಾಮಿನ್ನಾಜ್ಞಾ ಯಥಾಜ್ಞಾತಾ ತದೈವ ಕ್ರಿಯತೆಮಯಾ ||
ಕದಾಚಿದ್ದಿವಸೇ ಯೋಗಿ ನಿಯೋಗಂ ಕೃತವಾನ್ ಮುದಾ ||೭೪||

ತದಾಜ್ಞಾಂ ಶಿರಸಾ ಧೃತ್ವಾ ದ್ರವ್ಯಂ ಸ್ವೀಕೃತ್ಯ ಯತ್ನತಃ ||
ಪಂಪಾಕ್ಷೇತ್ರಮುಪಾಗಮ್ಯ ಶಿಲ್ಪಿಭ್ಯಃ ದತ್ತದೌಮುದಾ ||೭೫||

ಕದಾಚಿದ್ದಿವಸೇ ತತ್ರ ಮಧ್ಯಭಿನ್ನಾಶಿಲಾತುಲಾ ||
ಏವಂ ಜಗುರ್ಜನಾಸರ್ವೇ ತಲಾಭಿನ್ನಾ ಇತೀರಿತಾಃ ||೭೬||

ಸರ್ವೈರ್ಮಿಲಿತ್ವಾ ಲಿಂಗಾಂಗಿ ಬಿಷ್ಟೇಶಂ ಶರಣಂ ಯಯೌ ||
ಮಾಭೈಷೀತಿರಾಶ್ವಾಸ್ಯ ಭೂತಿರೇಖಾ ತ್ರಯಂ ಕೃತಂ ||೭೭||

ಭೂತಿಶಕ್ತ್ಯಾ ತುಲಾಃಸರ್ವಾಃ ಬಿಷ್ಟೇಶಾನ ಮಹಾತ್ಮನಾಃ||
ಏತಾಶ್ಚಿತ್ರೀ ಕೃತಂ ಕರ್ಮ ದೃಷ್ಟ್ವಾ ಸಂತುಷ್ಟ ಮಾನಸಃ ||೭೮||

ಪೌರಜನಪದಾಶ್ಚರ್ಯೋ ಯೋಗೀನಂ ಪ್ರಶಶಂಸಿರೆ ||
ಅಥೈಕಸ್ಮಿನ್ ದಿನೇ ಲಿಂಗಧಾರಿ ತಂ ಸಮಪೃಚ್ಛತ ||೭೯||

ಭೋ ಭೋ ಸ್ವಾಮಿನ್ ಮಹಾಯೋಗಿನ್ ಕೃಪಾಂಕುರು
ದಯಾನಿಧೆ ||
ಸಶರೀರ ಸ್ವರ್ಗಗತಿಂ ದೇಹಿ ಮೇ ಪಾಪಕರ್ಮಣಃ ||೮೦||

ಲಿಂಗಧಾರಿವಚಃಶೃತ್ವಾ ಬಿಷ್ಟೇಶೋ ಮುನಿಸತ್ತಮಃ ||
ತದೇಚ್ಛಾ ವರ್ತತೆ ತೇಹ್ಯೋ ತಥಾಸ್ತ್ವಿತ್ಯ ಭವೀತ್ವಚಃ ||೮೧||

ಲಿಂಗಾಂಶಸ್ತದ್ವಚಃ ಶೃತ್ವಾ ಸ್ಮಿತಾಸ್ಯೋ ಹೃಷ್ಟಮಾನಸಃ ||
ಕಾರಯಿತ್ವಾಸ್ವಲೀಲಾರ್ಥಂ ಸ್ವಜಾತೇವಿಧಿಪೂರ್ವಕಂ ||೮೨||

ಚತರಸ್ರಂ ಸುಗರ್ತಂ ವೈ ತತ್ರೈವಾಂತಃ ಸ್ಥಿತಂ ತದಾ ||
ಶಿವಧ್ಯಾನಪರಂ ಲಿಂಗಧಾರಿಣಂ ದೃಷ್ಟ್ವಾಮುತ್ಸುಕಃ ||೮೩||

ಜನಾಃಸರ್ವೇಪಿಸಾಮೋದಾಃ ವಿಮಾನಾಂತಿಮಾಯಯುಃ ||
ವಿಮಾನಂ ವರಯಾಮಾಸ ಲಿಂಗಾಂಕಂ ಪ್ರಶಶಂ ಸಿರೆ ||೮೩||
ಅಹೋ ಈಶ್ವರ ಚರ್ಯೇಯಂದುರ್ವಿಭಾವ್ಯಾ ಶರೀರಿಣಾ ||೮೪||
ಇತ್ಯಾದಿ ಚರ್ಯಂ ಕೃತ್ವಾತು ಲೋಕಾನುಗ್ರಹಕಾಮ್ಯಯಾ ||
ಲಿಂಗಾನಾಂ ವಿಂಶತಿಂ ಕೃತ್ವಾಭಕ್ತೇಭ್ಯಪ್ರದದೌಪ್ರಭು ||೮೫||
ಏಕವಿಂಶತಿಮಂ ಲಿಂಗಂ ಬಿಷ್ಟೇಶಃ ಕರ್ತುಮುದ್ಯತಃ ||
ದದ್ಧೌಪರ್ಣಕುಟಿಸಂಸ್ಥಃ ಶಿವಂ ಸಾಂಬಂ ಸನಾತನಂ ||೮೬||
ತದಾ ಜ್ವಾಲಾ ಸಮೂಹೋಭೂನ್ನರಾಣಾಂ ಪಶ್ಯತಾಂಭುವಿ ||
ಅಗ್ನಿರೂಪೇಣ ಚಾಗತ್ಯಸ್ವಯಂ ಸ್ವಾಮಿ ರಸಾತ್ಮಕಂ ||೮೭||
ಮಹಾಲಿಂಗಂ ದದೌ ಹಸ್ತೇ ಬಿಷ್ಟೇಶಸ್ಯ ಮಹಾತ್ಮನಃ ||
ತತ್ಕಾಲೇ ಪಶ್ಯತಾಂ ನೃಣಾಂ ಕುಟೀರಸಮುದಗ್ಧತ ||೮೮||
ಬಿಷ್ಟೇಶೋ ದಗ್ಧ ಇತ್ಯೇವ ಲೋಕಾನಾಂವಾಗಭೂತ್ಕಿಲ ||
ತತೋ ಮುಹೂರ್ತೇಕಾಂತಂ ಭೂಜ್ವಾಲಾ ಬಿಷ್ಟೇಶಪಾರ್ಶ್ವಗಾ ||೮೯||
ಸ್ವಸ್ಥರೂಪೀನ ಮದ್ದೇವಃ ನೃಣಾಂ ದೃಷ್ಟಿಗತೋಭವತ್ ||
ತಲ್ಲಿಂಗಂ ಸ್ವರ್ಣಸಂಕಾಶಂ ಮಹಾಗುರುತರಂ ಸ್ವಯಂ ||೯೦||
ಹಸ್ತೇ ಧೃತ್ವಾ ಪೂಜಯತಿ ನಿತ್ಯಂ ಸರ್ವೋಪಚಾರಕೈಃ ||
ಏತಸ್ಮಿನ್ನಂತರೇ ಕಾಲೇ ಗೋಪುರಂ ಪೂರ್ಣತಾಮಗಾತ್ ||೯೧||
ಆಕಾಶಚುಂಬಿಶೃಂಗಾಗ್ರಂ ಪೂರ್ವದ್ವಾರೆ ಖಗಾತ್ಮಕಂ ||
ತದಾ ಶಿವಾಖ್ಯಂ ಸ್ವಪುತ್ರಂ ಉವಾಚ ವ್ರತಿನಾಂವರಃ ||೯೨||
ಪುತ್ರಗೋಪುರ ಮೀಕ್ಷಸ್ವನತ್ವಂಚಾಥ ಕುತೂಹಲಾತ್ ||
ಇತ್ಯುಕ್ತಃಸತು ತೇಜಸ್ವಿ ತಪಃಕುರ್ವನ್ನಿಜಾಲಯೇ ||೯೩||
ಸ್ಥಿತಸ್ತಸ್ಯಚ ಜಾಯಾ ಭೂದ್ಗುರ್ವಿಣೀಕಾಲಯೋಗತಃ|| ||೯೩||
ಮಹಾ ತೇಜೋಯುತಂ ಗರ್ಭಂ ಬಿಭ್ರಾಣಾಂ ಲೋಕಸುಂದರಂ ||
ಪ್ಯರಾಜತ ಪುರಸ್ತಸ್ಯ ಮಹಾಯೋಗಿ ಭವಿಷ್ಯತಿ ||೯೪||

ಇತಿದ್ಯೋತಯಿತುಂ ರೂಪಮಾಶ್ಚರ್ಯಂ ಕುರ್ಯತಾಂ ಬಭೌ ||
ತತಃ ಶಿವಾರ್ಯಃ ಪಿತರಂ ನತ್ವಾ ಕೋಟೀಶ್ವರಶ್ಯಸ್ಥಳಂ ||೯೫||

ಗತ್ವಾತಪಃ ಕರ್ತುಮಿಚ್ಛನ್ ಶಿಷ್ಯಾನುಗ್ರಹಮಾರಮೋತ್ ||
ತತೋ ಬುದ್ಧಿಃ ಸಮುತ್ಪನ್ನಾ ಗೋಪುರಂ ದೃಷ್ಟುಮುತ್ಸುಕಾ ||೯೬||

ಸಂಪಾ ದಕ್ಷಿಣಭಾಗಸ್ಥಂ ಗತ್ವಾಜಾಂಬವತೀಶ್ವರಂ ||
ಜಾಂಬವತ್ಪೂಜಿತಂ ದೃಷ್ಟ್ವಾ ತನ್ನಗಾಗ್ರೇ ಸ್ಥಿತಃಸ್ವಯಂ ||೯೭||

ದದರ್ಶಗೋಪುರಂ ಚಾರು ಶೃಂಗಾಗ್ರಗತಭಾಸ್ಕರಂ ||
ತತಃ ಪಿತುರ್ವಚಶ್ಕೃತ್ವಾ ತನ್ನಗಾಗ್ರಾದ್ವಿನಿರ್ಗತಾ ||೯೮||

ಕೋಟೀಶ್ವರಂ ಸ್ಥಳಂ ಪ್ರಾಪ್ತ್ವಾ ತಪೋಧ್ಯಾನ ಸ್ಥಿತಃಶಿವಃ ||
ತದಾ ಶಿವಾಜ್ಞಯಾ ಯೋಗೀ ಶಿವಲೋಕಂ ಜಗಾಮುಸಃ ||೯೯||

ತದಾ ಬಿಷ್ಟೇಶ್ವರೊ ಯೋಗೀ ರಂಗಪುರ್ಯಾಂ ಸಮುಸ್ಥಿತಃ ||
ರಾಮೇಶ್ವರಾಲಯಾತ್ ಬಾಹ್ಯಂ ಗತ್ವಾ ಶಿವಶಿವೇತಿ ಸಃ ||೧೦೦||

ಶಿಷ್ಯಾನುವಾಚ ಸ್ನಾನಾರ್ಥಂ ತುಂಗಭದ್ರಾಮುಗಂತ್ಸ್ವಯಂ ||
ಸ್ನಾತ್ವಾ ತಿಷ್ಠತಶಿಷ್ಯಾಸ್ತೇ ಸ್ನಾನಕಾಲೊ ನಚಾದ್ಯಭೋ ||೧೦೧||

ಇತಿಕ್ತೋ ಬಿಷ್ಟಯೋಗೀಶಃ ಸ್ವಜನಾನ್ ತಾನಥಾಭವೀತ್ ||
ಕಲಿರ್ಮಾಹಾತ್ಮಾ ಪಾಪಿಷ್ಠಃ ಇತಿ ಚೇತಶ್ಚ ಮಾನವಃ ||೧೦೨||

ಮಹಾಪಾತಕಿನೋ ಭಾವ್ಯಂ ಶಿವೋಪ್ಯ ಶಿವತಾಂಗತಃ ||
ಸಾಕಾರತ್ವಂ ಪರಿತ್ಯಜ್ಯ ನಿರಾಕಾರತ್ವಮಾಗತಃ ||೧೦೩||

ಇತ್ಯುಕ್ತವತಿಯೋಗೀಶೆ ಮುಹೂರ್ತದ್ವಯ ಮಾತ್ರತಃ ||
ತದ್ವೃತ್ತಾಂತಂ ವ್ಯಕ್ತಮಭೂತ್ ತ್ರಿವೇಣ್ಯಾಂಬಾಚ ತಪ್ತತ ||೧೦೪||

ಸೋವಾಚ ಶಶರಂತ್ಯಕ್ಷೇ ಕಲೇಬರಮಿದಂಪ್ರಭೋ ||
ಯೋಗಿನೋ ಶಿವರೂಪಸ್ಯ ಶಿವಹೀನಾ ಕಿಮುಸ್ಮ್ಯಹಂ ||೧೦೫||

ಇತ್ಯುಕ್ತವತ್ಯಾಂ ತಸಾಂತು ಬಿಷ್ಟೇಶಃ ಪ್ರಹಸನ್ಸ್ನುಷಾಂ ||
ಕೋಯಂತವತ್ವಮೇವಾಸ್ಯಕಾಭಿನತ್ತಿ ಸುಮಧ್ಯಮೆ ||೧೦೬||

ಕಿಂ ತಪ್ಯಸೇದ್ಯಮನ್ನಾತಃ ತವಾತ್ಮಾನಂ ಸ್ಮರಪ್ರಭುಂ ||
ತ್ವಮೇವ ಶಿವರೂಪಾಸಿ ಶವಂ ತ್ಯಕ್ತ್ವಾ ಶಿವಂ ಸ್ಮರ ||೧೦೭||

ಸ್ತ್ರೀಜನ್ಮಸ್ಯಾಂ (ನೋ೦) ತರ್ಪತ್ನೀತಂ ಮಹಾದೇವಂ ಪ್ರಸುಷ್ಯತಿ ||
ರಾಜಯೋಗಿ ಮಹಾದೇವೋ ಭವಿಷ್ಯತಿ ನ ಸಂಶಯಃ ||೧೦೮||

ಶಿವಯೋಗೀ ಯೋಗಮಾರ್ಗಾದ್ಯೋಗಪಾರಗತೋವಶೀ ||
ಇತ್ಯುಕ್ತ್ವಾ ಸಾ ಗುರೋರ್ವಾಕ್ಯಮಗ್ರಹೀತ್ ಜ್ಞಾನಲೋಚನಾ ||೧೦೯||

ತತಃಕಾಲೇನ ಕಿಯತಾ ಸೋಚ್ಚಗ್ರಹನಿರೀಕ್ಷತೆ ||
ಗುರುಚಂದ್ರಾಂಗಾರಕಾನಾಂ ಪರಸ್ಪರದೃಶೇಕ್ಷಿತೆ ||೧೧೦||

ಶುಭಲಗ್ನೇ ಸುತಂ ಪ್ರಾಪ್ತ ಕುಮಾರಮಿವ ಪಾರ್ವತಿ ||
ತದಾ ಬಿಷ್ಟೇಶ್ವರೋ ದೃಷ್ಟ್ವಾ ಪೌತ್ರಂ ವಂಶಸ್ಯಭೂಷಣಂ ||೧೧೧||

ಅಯಂ ಮಹಾದೇವ ನಾಮಾ ಅತುಲ್ಯಬಲಪೌರುಷ ||
ಶಿಖರಂ ಮಹ್ಯೋಪುರಸ್ಯ ಸ್ಥಾಪಯಿಷ್ಯತ್ಯಸಂಶಯ ||೧೧೨||

ಇತಿ ತಾಂ ಸಃ ಸ್ನುಷಾ ಮುಕ್ತ್ವಾ (ಕ್ತ್ವೋ)ಕಿಂಚಿತ್ಕಾಲಂ ಸ್ವಯಂ ಸ್ಥಿತಃ ||
ಲೋಕೋತ್ತರಾಣಿ ಕಾರ್ಯಾಣಿ ಚಕಾರ ಬಹುಶಸ್ತತಃ ||೧೧೩||

ಕಾರ್ತಿಕಸ್ಯಾಮಾವಾಸ್ಯಾಂ ಶಿವಾರಾಧನಮುದ್ಭತಂ ||
ಭೋಜನಂ ಬ್ರಾಹ್ಮಣಾನಾಂತು ಮಹಾದೇವೇನ ಯೋಗಿನಾ ||೧೧೪||

ಕಾರಯಾಮಾಸಯಃಸ್ಮಿನ್ವೈ ಜನಸಂಖ್ಯಾ ನ ವಿದ್ಯತೆ ||
ಭಕ್ತೇಭ್ಯ ತೀರ್ಥಭಸ್ಮಾನಿ ದತ್ತಾನುಗ್ರಹ ಸಾ ಸ್ನುಷಾ ||೧೧೫||

ಇತ್ಥಂ ಕಿಂಚಿದ್ದಿನಂ ಸ್ಥಿತ್ವಾ ಪೌತ್ರಸ್ಯ ದ್ವಿಜಜನ್ಮತಾಂ ||
ಕಾರಯಾಮಾಸ ಕೃಪಯಾ ತಸ್ಯ ಶೀರ್ಷಿಕರಂ ದಧನ್ ||೧೧೬||

ಕರ್ಣೇ ಮಂತ್ರಂ ಸಮುಚ್ಚಾರ್ಯ ಶಿವರೂಪಂ ಚಕಾರಸಃ ||
ತಸ್ಯ ಪೂರ್ಣಾಶಿಷೋದತ್ವಾ ಸ್ನುಷಾಯಾ ಅಪ್ಯನುಗ್ರಹ. ||೧೧೭||

ಕೃತ್ವಾ ಮಾಭೈಷಿರಿತ್ಯೇವಂ ಸಹಪುತ್ರೇಣವದ್ಯಹಂ ||
ಭೂಷಯಾಹಂ ಗಮಿಷ್ಯಾಮಿ ತ್ಯಕ್ತ್ವಾ ಸರ್ವಂ ವನಾಶ್ರಮೆ ||೧೧೮||

ಶಂಕರಂ ಯೋಗಿನಂ ಮತ್ವಾ ತುರ್ಯಾಶ್ರಮಮುಪಾಗತಃ ||
ತತಃಕತಿ ಪಯೋಕಾಲೇ ಶಿವತೀರ್ಥಂ ಯಯೌ ಮುದಾ ||೧೧೯||

ತತ್ರೈವ ಮಾಸಮೇಕಂತು ಸ್ಥಿತ್ವಾ ಲಿಂಗಂ ಚಕಾರಸಃ ||
ತತಃ ಪಂಪಾಪುರ ಪ್ರಾಪ್ಯ ಪೂರ್ವದ್ವಾರಂ ಪ್ರವೇಶ್ಯಚ ||೧೨೦||

ಶಿವಾಂತರ್ಗೃಹಮಾವಿಶ್ಯ ಸರ್ವೇಷಾಂ ಪಶ್ಯತಾಂ ನೃಣಾಂ ||
ತತ್ರೈವಾಂತರ್ದಧೆ ಯೋಗೀ ಪಾಪಿನಾಂ ದೃಷ್ಟಿದೂರಗಃ ||೧೨೧||

ಭಾದ್ರೇಶುಕ್ಲ ದ್ವಿತೀಯಾಯಾಂ ಬ್ರಾಹ್ಮಣಾಶ್ಚ ದ್ವಿಜಾತಯಃ ||
ಆರಾಧನಂ ಪ್ರಕುರ್ವಂತಿ ಗುರುಭಕ್ತಿ ಸಮನ್ವಿತಾಃ ||೧೨೨||

— ಇತಿ ಶ್ರೀ ಬಿಷ್ಟೇಶೋಪಾಖ್ಯಾನೇ ದ್ವಿತೀಯ ಸರ್ಗಃ ಸಮಾಪ್ತಃ —

## — ಅಥ ತೃತೀಯ ಸರ್ಗ ಪ್ರಾರಂಭಃ —

# ಪ್ರಕರಣ ೩

ಶ್ರೀ ಬಿಷ್ಟಪ್ಪಯ್ಯನ ಚರಿತ್ರೆ ಬರೆಯಲಿಕ್ಕೆ ಮೂಲಾಧಾರವಾಗಿ ದೊರೆತ ಪುರಾಣದ ನಕ್ಕಲಿನಲ್ಲಿ ಮೂರನೇ ಸರ್ಗದೊಳಗೆ ಶ್ರೀ ಮಹಾದೇವಪ್ಪಯ್ಯನವರ ಚರಿತ್ರೆ ಕೇವಲ ೩೩ ಶ್ಲೋಕಗಳು ಮಾತ್ರ ಇವೆ. (ಮತ್ತು ಈ ವಿಷಯ ಆರನೇ ಪ್ರಕರಣದಲ್ಲಿ ಬರೆಯಲಾಗಿದೆ. ಮತ್ತು ಕರ್ಣೋಪಕರ್ಣವಾಗಿ ಕೇಳಿಕೆಯ ವಿಷಯ ಕೆಲವು ಇವೆ.) ಅವುಗಳನು ಕನ್ನಡ ಲಿಪಿಯಲ್ಲಿ ಇದ್ದಕಿದ್ದಂತೆ ಈ ಪ್ರಕರಣದಲ್ಲಿ ಬರೆಯಲಾಗಿದೆ.)

— ಲೇಖಕ

ಹರಹರ ಪರಮೇಶಾನಂದಕಂ ದೇಶ ಶಂಭೋ |
ಶಿವ ಶಿವ ಕರುಣಾಬ್ಧೆ ಶಂಕರಾಶೇಷಹೇತೊ |
ಭವಭವ ಭಯಹಾರಿನ್ ದೇವದೇವೇತಿ ನಿತ್ಯಂ |
ಶಿವನಗರ ನಿವಾಸಾಸಕ್ತಚಿತ್ತಾಃ ವದಂತಿ ||೧||

ಅಥ ಸೋಮವಾರೇ ದೇವ್ರೋರ್ಚಃ ಪಿತಾಮಹಮನೋರಥಃ ।
ಪಿತಾಮಹೋಪನೀತಸ್ಯಬಾಲ್ಯೇವೈನಂ ದ್ವಿವಾರ್ಷಿಕೆ ॥೨॥
ಸ್ವಲ್ಪ ಶ್ರವಣ ಮಾತ್ರೇಣ ವೇದಾಧ್ಯಯನ ತತ್ಪರಃ ।
ತದಾಶ್ಚರ್ಯಗತಮಂ ದೃಷ್ಟ್ವಾ ತಸ್ಯ ಮಾತಾ ಯಶಸ್ವಿನಿ ॥೩॥
ಪಿತಾಮಹಾನುಗ್ರಹೀತ ಇತಿ ತೋಷಂ ಬಭಾರ ಸಾ ।
ತತಃಕಾಲೇ ಪಯೇಕಾಲೆ ಮಾತಾಸಮಮಂತ್ರಯತ್ ॥೪॥
ಅತಃಪಿತಾ ಮಹೋಕ್ತಂ ಯತ್ ಗೋಪುರೇ ಕಲಶಸ್ಥಿತಿಃ ।
ಲಕ್ಷ ಸಂತರ್ಪಣಾ ಕಾರ್ಯಂ ಬ್ರಾಹ್ಮಣಾನಾಂತು ಪೂಜನಂ ॥೫॥
ವಿರೂಪಾಕ್ಷ ಪ್ರೀತಿಕರಂ ಯನ್ಮದ್ವಂಶಸ್ಯಭೂಷಣಂ ।
ತವ ಚಿತ್ತೇ ಕಥಂ ಭಾತಿ ಮಯಿ ತದಭಿರೋಚತೆ ॥೬॥
ತದಾಕರ್ಣ್ಯ ತ್ರಿವೇಣ್ಯಂಬಾ ಪುತ್ರಂದೃಷ್ಟ್ವಾ ಯಶಸ್ವಿನಂ ।
ಪುತ್ರತ್ವಮೇವ ಜಾನಾಸಿ ತದನುಗ್ರಹವೈಭವಂ ॥೭॥
ಸ್ತ್ರಿಯಾ ಮಯಾ ಕಿಂಕರ್ತವ್ಯಂ ತವ ಧೈರ್ಯಂ ತಥಾಸ್ತಿ ಚೇತ್ ।
ಇಹಾದ್ಯೈವ ವಿರುಪಾಕ್ಷಮಿತಿಮಾತೃವಚಸ್ತ್ವಸೌ ॥೮॥
ಅಂಗೀಕೃತ್ಯಾ ಬ್ರವೀದ್ವಾಕ್ಯಂ ಬಿಷ್ಟೇಶಸ್ಯವರಾಕೃಪಾ ।
ತ್ವಯಿಮಯ್ಯಾಪಿ ಸಂಧತ್ತೆ ತತ್ ಸಂಸ್ಥಾನೇಪ್ರತಿಷ್ಠತಿ ॥೯॥
ಗಚ್ಛಾವಃ ಪಂಪಾಮಿತ್ಯುಕ್ತ್ವಾ ಚತುರ್ಭಿರ್ಬ್ರಾಹ್ಮಣೈಃಸಹ ।
ಪಂಪಾಸ್ಥಾನಮನುಪ್ರಾಪ್ಯ ಗೋಪುರಂ ಸಂನಿವೀಕ್ಷಸಃ ॥೧೦॥
ಅಹೋತಿ ದುಷ್ಕರಂ ಕೃತ್ಯಂ ನಷ್ಟಪೂರ್ವಜ ಸಂಚಿತಂ ।
ತದನುಗ್ರಾಹ್ಯಮೇವಾದ್ಯ ಮಮಕಾರ್ಯಂ ಕರಿಷ್ಯತಿ ॥೧೧॥
ಇತಿ ನಿಶ್ಚಿತ್ಯ ತತ್ರೈವಂ ದೇವಸಾನ್ನಿಧ್ಯಮಾಗತಃ ।
ಚತುರ್ಥದಿವಸೋ ಜಾತಃ ನ ದರ್ಶನ ಮಹೋತ್ಸವಃ ॥೧೨॥
ತತಸ್ತು ಪಂಚಮೇಽಹನಿಮಾತಾಽಹೂಯೇದಮಬ್ರವೀತ್ ।
ವತ್ಸ ಕಿಂ ಕೃತಮಾವಾಭ್ಯಾಮತ್ರಾಗತ್ಯ ಮಹಾಸ್ಥಲಂ ॥೧೩॥

ಜನಾಪಹಾಸಲುಭವದ್ದ್ರವ್ಯಜಾಲಂ ನ ಕಿಂಚನ ।
ಕಲಶಸ್ಥಾಪನೇಽಹನಿ ಧನ ಸಂಪತ್ತಿರಸ್ತಿ ಚೇತ್ ॥೧೪॥

ಕಥಮೇನಂ ತ್ವಯಾ ಬಾಲ್ಯೆ ಇತಿ ಮಾತುರ್ವಚಸ್ತದಾ ।
ಶ್ರುತ್ವಾ ವಿರುಪಾಕ್ಷ ಏವ ಗತಿರಸ್ಮಾಕಮಿತ್ಯಯಂ ॥೧೫॥

ಪ್ರವಿವೇಶ ಶಿವಾಗಾರಂ ಗರ್ಭಾಲಯಮತಂದ್ರಿತಃ ।
ಶಂ ನಮಸ್ಕೃತ್ಯಚಾಪ್ರಾಕ್ಷೀದ್ದೇವದೇವಂ ಜಗತ್ಪತಿ ॥೧೬॥

ಪಿತಾಮಹಕೃತಂಹ್ಯೇತತ್ ಕಥಮೇಕೇನ ವೈಮಯಾ ।
ಪೂರ್ಣಂ ಭವತಿ ದೇವೇಶ ತಥಾನುಗ್ರಹ್ಯತಾಂಮಿತಿ ॥೧೭॥

ತದಾಶ್ರೀವಿರುಪಾಕ್ಷೇಶಃಕೃಪಾಲೋಕನ ತತ್ಪರಃ ।
ಉವಾಚೇದಂ ಕೃಪಾರಾಶಿಃ ವತ್ಸ ಮಾಕುರು ಚಿಂತನ ॥೧೮॥

ಗಚ್ಛೋತ್ತರದ್ವಾರಬಹಿಃ ಮನ್ಮೌಖಿಜಲಸನ್ನಿಧೌ ॥
ತತ್ತೀರ್ಥೇಽಸ್ತಿ ಮಹಾಶಾಲಾ ಪಶ್ಯ ತತ್ರ ಯಥೇಪ್ಸಿತಂ ॥೧೯॥

ದ್ರವ್ಯಜಾಲಂ ಪಾತ್ರಜಾಲಂ ಕಲಶಂಚ ಸಮಾನಯ ।
ಇತ್ಯುಕ್ತೋ ದೇವದೇವೇನ ಮಹಾದೇವಾರ್ಯಕಃಸ್ವಯಂ ॥೨೦॥

ಚತುರ್ಭಿಃಬ್ರಾಹ್ಮಣೈಸ್ಸಾಕಂ ಶತ್ತೀರ್ಥಾಪಃ ಪ್ರವಿಶ್ಯಚ ।
ಜಲಾಧೋ ಭಾಗದೇಶೇಚ ಶಾಲಾಮೇಕಾಂ ನಿರೀಕ್ಷ್ಯಚ ॥೨೧॥

ವಿವೇಶ ತನ್ಮಧ್ಯಗತಂ ದ್ರವ್ಯರಾಶೀ ದದರ್ಶ ಸಃ ।
ತಾನುವಾಚಾನುಗಃ ಸರ್ವೇ ಗೃಹ್ಣೀಧ್ವಂ ದ್ರವ್ಯಸಂಚಯಂ ॥೨೨॥

ಮಾತಾಮಮ ಯಥಾ ಬಾಲಂ ಇತಿಮಾಂ ನ ಪ್ರವೀಕ್ಷತಿ ।
ತಾವದ್ರಾಶಿಂ ಗೃಹೀತ್ವೈವ ಗಚ್ಛಧ್ವಂ ಮಾತುರಂತಿಕಂ ॥೨೩॥

ಇತ್ಯುಕ್ತಾಸ್ತೆ ಬ್ರಾಹ್ಮಣಾವೈಚತ್ವಾರೋಭಾರವಾಹಕಾಃ ।
ತೀರ್ಥೇ ನಿಮಜ್ಯೋನ್ಮಜ್ಜಸ್ಮ ತೀರ್ಯ)ಮಾತ್ರಾಂತಿಕ
ಮುಪಾಯಯುಃ

ಯಾವನ್ಮಾತ್ರಾ ಪ್ರಮುದಿತಸ್ತಾವದ್ರವ್ಯಂಸಮಾಹರನ್ ।
ಪಾಕಪಾತ್ರಾಣಿ ತಥಾಬಹೂನಿಚ ಸಮಾನಯನ್ ॥೨೫॥

ಗೋಪುರಾಗ್ರೆ ಪ್ರತಿಷ್ಠಾಪ್ಯರೌಪಕ್ಮಂಕಲಶಪಂಚಕಂ ।
ತತಃ ಪರದಿನೇ ಲಕ್ಷ ಭೋಜನಾರಂಭಪಾಕಕಂ ॥೨೬॥

ಪ್ರಾರಂಭಂತಃಕ್ರಿಯಾಃಸರ್ವಾಃ(ಗಣಾ)ಜನಾ ಏವಮುದಾನ್ವಿತಾಃ ।
ಪಾಕಾರಂಭೆ ಗುಡೋನಾಸ್ತಿಕಥಮಿತ್ಯವದನ್ಜನಃ ॥ ॥೨೭॥

ಮಹಾದೇವೋಪಿತಚ್ಛೃತ್ವಾ ಆಹಾಪರಿಚಾರಕಾನ್ ।
ಆನಯಧ್ವಂ ತುಂಗಭದ್ರಾ ಶರ್ಕರಾಂ ಪಿಟಕೈರಹೋ ॥೨೮॥

ಭವೇಚ್ಛರ್ಕರಯಾ ಪಾಕೇ ಮಾಕುರುಧ್ವಂ ವಿಲಂಬಿತಂ ।
ಗುಡಾನಯನ ಹೇತೋಸ್ಮಿ ಹನುಮಾನ್ ಪ್ರೇಷಿತೋಭವೇತ್ ॥೨೯॥

ಆಗಚ್ಛತಿ ಗುಡಂಭೂರಿ ತಾವತ್ಪಾಕೋ ವಿಧೀಯತಾಂ ।
ಇತಿ ತದ್ವಚನಂ ಶ್ರುತ್ವಾ ತಥೇತಿ ಪರಿಚಾರಕಾಃ ॥೩೦॥

ತುಂಗಾ ತೀರ್ಥಸ್ಥ ಮೃತ್ಸ್ನಾಂತೆ ಪಾಕಶಾಲಾಕರೋತ್ತದಾ ॥
ತಾವದ್ಗುಡಮಭೂತ್ತತ್ರ ವಿಸ್ಮಯಂತೇಜನಾಯಯುಃ ॥
ತತೋ ಮುಹೂರ್ತದ್ವಿತಿಯಾದ್ಗುಡಭಾರಂಶತ್ವೈರ್ಯುತಂ ।
ಸಮೀಕ್ಷಸಃ ॥೩೧॥

ಮಹಾದೇವೋ ಜನಾನಾಹ ಗುಡಮಾಯಾತಮಿತ್ಯಥ
ಗುಡಭಾರಮಿದಂತಾವತ್ಸಮುತ್ತಾದ್ಯಜನಾ ಇತಿ ॥೩೨॥

———



ಶ್ರೀ ಹಂಪೆ ವಿರುಪಾಕ್ಷೇಶ್ವರ ದೇವಾಲಯದ
ಮಹಾದ್ವಾರ ಗೋಪುರ

## ಪ್ರಕರಣ ೨

# ಶ್ರೀ ಮದಾದ್ಯ ಬಿಷ್ಟೇಶರ ಚರಿತ್ರೆ

### ೧ ಪ್ರಾರ್ಥನೆ.

ಪಂಚತತ್ವಗಳ ಮಹಿಮೆಯನ್ನು ಅರಿತವರೂ, ವೇದಗಳ ಸಾರವನ್ನು ತಿಳಿದವರೂ, ಮಹಾ ಯೋಗಿಗಳೂ ವರ್ಣಿಸಲಸಾಧ್ಯರೂ, ಕಲಿಕಾಲದಲ್ಲಿಯ ಪಾಪವೆಂಬ ಕತ್ತಲೆಯನ್ನು ಕಳೆಯುವ ಸೂರ್ಯಪ್ರಕಾಶರೂ, ಸರ್ವೇಶ್ವರನಂತೆ ಪ್ರಭಾವಶಾಲಿ ಚರಿತ್ರೆಯುಳ್ಳವರೂ, ಪವಿತ್ರ ಆಚಾರವಂತರೂ, ಪಂಚಕೃತ್ಯ (ಸೃಷ್ಟಿ, ಸ್ಥಿತಿ, ಲಯ, ನಿಗ್ರಹ, ಅನುಗ್ರಹಗಳೆಂಬವು)ಗಳಲ್ಲಿ ಪ್ರವೀಣರಾದಂಥವರೂ ಮಂಗಲಕರ ಮಾನುಷರೂಪಧಾರಿಗಳೂ ಭಕ್ತಜನರಲ್ಲಿ ಕೃಪಾವಂತರೂ ಆದ ಶ್ರೀ ಬಿಷ್ಟೇಶ ಮಹಾಯೋಗಿವರ್ಯರೇ ಚರಿತ್ರಲೇಖನ ಕಾರ್ಯಕ್ಕೆ ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತೇನೆ.

ಶ್ರೀಮದ್ ಸದ್ಗುರುಗಳನ್ನೂ ಸಕಲಕಾರ್ಯಸಿದ್ಧಿಪ್ರದನಾದ ಗಣನಾಥನನ್ನೂ ವಾಚಾಪ್ರವೀಣ ಶಾರದೆಯನ್ನೂ ಅನನ್ಯಭಾವದಿಂದ ಸ್ಮರಿಸಿ, ಲೋಕಕಲ್ಯಾಣಕಾರೀ ಶ್ರೀ ಬಿಷ್ಟೇಶರ ಚರಿತ್ರೆಯನ್ನು ಬರೆಯಲು ಪ್ರಾರಂಭಿಸುತ್ತೇನೆ.

### ೨ ಜನ್ಮರಹಸ್ಯ

ಶ್ರೀಪಂಪಾಕ್ಷೇತ್ರವು ಪುರಾಣಕಾಲದಿಂದಲೂ ಪ್ರಸಿದ್ಧವಾದ ಪಾವನತರ ಸ್ಥಾನವು. ರಾಮಾಯಣ ಕಾಲದಲ್ಲಿ ಇದು ಬಹಳವಾಗಿ ಸುಶೋಭಿತವೂ ಪ್ರಖ್ಯಾತವೂ ಆಗಿತ್ತು. ಮಹಾಬಲಶಾಲಿಯಾದ ವಾನರವೀರ ವಾಲಿಯರಾಜ್ಯವಾದ ಕಿಷ್ಕಿಂಧೆಯು ಇದೇ ಭಾಗದಲ್ಲಿ ಇತ್ತು. ಶ್ರೀರಾಮಭಕ್ತ ಮಾರುತಿಯ ಜನ್ಮಸ್ಥಾನವೂ ಇಲ್ಲಿಯೇ ಇರುತ್ತದೆ. ಮಹಾಮಹಾ ಜ್ಞಾನಿಗಳಾದ ಮುನಿಪುಂಗವರು ಮಿಂದು ಪಾವನಗೊಳಿಸಿದ ಪಂಪಾಸರೋವರವೂ ಇಲ್ಲಿಯೇ ಇರುತ್ತದೆ. ಪೂರ್ವಕಾಲದಲ್ಲಿ ಮಹಾಭಗವದ್ಭಕ್ತನೆಂದು ಹೆಸರಾದ ಸಾಮ್ರಾಟ ಚಂದ್ರಹಾಸನ ರಾಜಧಾನಿ ಕುಂತಳಪುರವು ಇಲ್ಲಿಯೇ ಸಮೀಪದಲ್ಲಿ ಇರುತ್ತದೆ. ಅದಕ್ಕೆ ಈಗ 'ಕುಕನೂರು' ಎಂಬ ಹೆಸರು ರೂಢವಾಗಿದೆ. ಪತಿತರನ್ನು

ಪಾವನಗೊಳಿಸುವ ತುಂಗಭದ್ರೆಯು ಅನೇಕ ಪುಣ್ಯಕಾರಕ ತೀರ್ಥಗಳಿಂದ ಕೂಡಿದವಳಾಗಿ ಇಲ್ಲಿಯೇ ಹರಿದುಹೋಗಿದ್ದಾಳೆ. ಒಟ್ಟಾರೆ ಈ ಪ್ರದೇಶವು ಪುರಾಣಕಾಲದಲ್ಲಿ ಪ್ರಸಿದ್ಧವಾದದ್ದಾಗಿದೆ. ಅಲ್ಲದೇ ಅರ್ವಾಚೀನ ಕಾಲದಲ್ಲಿ ಯವನರ ಕಾಟದಿಂದ ಹಿಂದೂಧರ್ಮವನ್ನು ರಕ್ಷಿಸುವದಕ್ಕಾಗಿಯೂ ಹಿಂದೂ ಸಾಮ್ರಾಜ್ಯವನ್ನು ಸ್ಥಾಪಿಸುವದಕ್ಕಾಗಿಯೂ ಶ್ರೀ ಭುವನೇಶ್ವರಿಯನ್ನು ಕುರಿತು ಶ್ರೀ ವಿದ್ಯಾರಣ್ಯರು ತಪಶ್ಚರ್ಯ ಮಾಡಿದ ಸ್ಥಾನವೂ ಇಲ್ಲಿಯೇ ಇರುತ್ತದೆ. ಮತ್ತು ಶ್ರೀ ಭುವನೇಶ್ವರಿಯು ವಿದ್ಯಾರಣ್ಯರ ತಪಸ್ಸಿಗೆ ಪ್ರಸನ್ನಳಾಗಿ ಅವರ ಇಚ್ಛೆಯಂತೆ ಸುವರ್ಣವೃಷ್ಟಿಮಾಡಿದ್ದಾದರೂ ಇದೇ ಸ್ಥಾನದಲ್ಲಿ.

ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ಪರಿಪಾಲಿಸಲಿಕ್ಕೂ ಅಳಿಯಹತ್ತಿರುವ ಪಾವನವಾದ ಹಿಂದೂ ಧರ್ಮವನ್ನು ಪುನರುಜ್ಜೀವನಗೊಳಿಸಿ ಕಾಪಾಡಲಿಕ್ಕೂ ಯೋಗ್ಯಸ್ಥಾನವೆಂದು ಕಂಡುಹಿಡಿದು ಶ್ರೀ. ವಿದ್ಯಾರಣ್ಯರು ಹಿಂದೂ ಸಾಮ್ರಾಜ್ಯವನ್ನು ಸ್ಥಾಪಿಸಲು ಶಂಕುಸ್ಥಾಪನೆ ಮಾಡಿದ್ದಾದರೂ ಇದೇ ಪವಿತ್ರವಾದ ಸ್ಥಾನದಲ್ಲಿ. ಅಖಂಡ ಮೂರು ಶತಮಾನಗಳ ವರೆಗೆ ಜಗತ್ತನ್ನೇ ಬೆರಗುಗೊಳಿಸುವಂತೆ ಮೆರೆದ ಅಖಿಲ ಕರ್ನಾಟಕದ ಸಾಮ್ರಾಜ್ಯದ ರಾಜಧಾನಿಯೂ ಎಲ್ಲ ಜಗತ್ತಿನ ಕಣ್ಣು ಕುಕ್ಕುವಂತೆ ವೈಭವದಿಂದ ಮೆರೆದ ಕುಬೇರ ನಗರಿಯೂ ವಿಸ್ತಾರದಲ್ಲಿಯೂ, ಸೌಂದರ್ಯದಲ್ಲಿಯೂ, ಅದ್ವಿತೀಯವೆಂದು ಖ್ಯಾತಿಪಡೆದ ಇಂದ್ರನಗರಿಯೂ, ಅಳಿದುಹೋಗಹತ್ತಿದ ಹಿಂದೂ ಧರ್ಮವನ್ನು ಪುನರುಜ್ಜೀವನಗೊಳಿಸಿ, ಸುಸ್ಥಿತಿಗೆ ಏರಿಸಿದ ಧರ್ಮನಗರಿಯೂ, ವಿದ್ಯಾವಂತರಿಗೆ ಆಶ್ರಯಸ್ಥಾನವಾಗಿ ವಿದ್ಯಾಭಿವೃದ್ಧಿಮಾಡಿದ ವಿದ್ಯಾನಗರಿಯೂ, ಹಿಂದೂ ಸಾಮ್ರಾಜ್ಯದ ರಾಜನಗರಿಯನ್ನು ನಾಮಶೇಷ ಮಾಡಬೇಕೆಂದು ಮುಸ್ಲಿಮರು ಹೊಟ್ಟೆಯುರಿಯಿಂದ ಸತತ ಆರುತಿಂಗಳು ದೀರ್ಘಕಾಲ ಶ್ರಮಿಸಿದರೂ ಪೂರ್ಣನಾಶವಾಗದೆ ಇಂದಿಗೂ ತಲೆಯೆತ್ತಿ ನಿಂತು ಪ್ರೇಕ್ಷಕರನ್ನು ಬೊಟ್ಟುಕಚ್ಚಲು ಹಚ್ಚುತ್ತಿರುವ ಶಿಲ್ಪಕಲೆಯ ಕಲಾನಗರಿಯೂ ಆಗಿ ಖ್ಯಾತಿವೆತ್ತ ವಿಜಯನಗರವು ನೆಲಸಿ, ನಲಿದು, ಬಾಳಿ, ಬೆಳೆದು ಅಳಿದು ಹೋದದ್ದಾದರೂ ಇದೇ ಸ್ಥಾನದಲ್ಲಿ.

ಅಳಿದು ಹೋದ ಅಖಿಲ ಕರ್ನಾಟಕ ಸಾಮ್ರಾಜ್ಯವು ಪುನರಪಿ ಮೂಡಿ ಬೆಳೆದು, ಬಾಳುವ ಶುಭ ಚಿನ್ಹವೋ ಎಂಬಂತೆ ಮೊನ್ನೆ ಮೊನ್ನೆ ಕರ್ನಾಟಕ ಹಿಂದೂ ಸಾಮ್ರಾಜ್ಯದ ಷಟ್ಶತಸಾಂವತ್ಸರಿಕ ಸ್ಥಾಪನೋತ್ಸವವನ್ನು ಅಖಿಲ ಕನ್ನಡ ನಾಡಿನ ಭಾಗ್ಯವಿಧಾತರು ನೆರೆದು ವೈಭವದಿಂದ ಜರುಗಿಸಿ, ಕನ್ನಡ ವೀರರಲ್ಲಿ ಹೊಸ ಚೈತನ್ಯವನ್ನು ಹುಟ್ಟಿಸಿದ್ದಾದರೂ ಇದೇ ಸ್ಥಾನದಲ್ಲಿ. ಇಂಥ ಮಹಾತ್ಮ್ಯಪೂರ್ಣ ಪಾವನತರ ಸ್ಥಳದಲ್ಲಿ ಜರಗುವ ಸಣ್ಣ-ಪುಟ್ಟ ಕಾರ್ಯಗಳಾದರೂ ಮುಂದೆ ಮಹತ್ವವನ್ನು ಹೊಂದುತ್ತವೆಂಬುದಕ್ಕೆ ಸಂದೇಹವಿಲ್ಲ. ಯಾಕಂದರೆ ನಮ್ಮ ನಾಯಕರ ತಂದೆಯವರು ಕೇವಲ ತಮಗೆ ಸಂತತಿಲಾಭವಾಗಬೇಕೆಂಬ ಇಚ್ಛೆಯಿಂದ ಮಾಡಿದ ತಪಸ್ಸು ಜಗತ್ತನ್ನೇ ಪಾವನಗೊಳಿಸುವ ಮಹಾ ವಿಭೂತಿಯು ಜನಿಸಲು ಕಾರಣವಾಯಿತು.

ಅಪ್ಪಯ್ಯ ಜೊಯಿಸರ ಮೂಲಸ್ಥಾನವು **ಸೋಗಿ** ಎಂಬ ಹೆಸರಿನ ಸಣ್ಣ ಗ್ರಾಮವು. ತುಂಗಭದ್ರೆಯ ದಕ್ಷಿಣ ದಡದಲ್ಲಿ ಇರುವ ಮಲ್ಲಿಕಾರ್ಜುನಬೆಟ್ಟ (ಬೆಟ್ಟದ ಮಲ್ಲಪ್ಪನ ಗುಡ್ಡ) ದ ಪೂರ್ವದ ಕಂದರದಲ್ಲಿ ಇರುತ್ತದೆ. ಅಪ್ಪಯ್ಯ ಜೊಯಿಸರು ಈ ಗ್ರಾಮದಲ್ಲಿ ಸಾಮಾನ್ಯ ಮನೆತನದಲ್ಲಿ ಹುಟ್ಟಿ ಬೆಳೆದವರು. ಜೋಯಿಸಿಕೆಯ ಉಂಬಳಿಯ ಮೇಲೆ ತಮ್ಮ ಉಪಜೀವನ ಸಾಗಿಸುತ್ತಿದ್ದರು. ಅತ್ರಿಗೋತ್ರೋತ್ಪನ್ನರಾದ ಈ ದ್ವಿಜೋತ್ತಮರು ವೇದವೇದಾಂಗಗಳಲ್ಲಿ ಪಾರಂಗತರಾಗಿ ಸಕಲ ಶಾಸ್ತ್ರಗಳನ್ನೂ ಬಲ್ಲ ವಿದ್ವಾಂಸರಾಗಿದ್ದರು. ಅಲ್ಲದೆ ಸುಶೀಲರೂ ಸದಾಚಾರಿಗಳೂ ಆಗಿ ಸುತ್ತುಮುತ್ತಲಿನ ಗ್ರಾಮಗಳಲ್ಲೆಲ್ಲ ಆದರ್ಶಜೀವಿಗಳಾಗಿದ್ದರು. ಇವರ ಪತ್ನಿಯವರಾದರೂಪತಿಭಕ್ತಿಪರಾಯಣರೂ ಪತಿಗೆ ತಕ್ಕಂತೆ ಆಚಾರಶೀಲರೂ ಆಗಿದ್ದರು. ಒಟ್ಟಾರೆ ಆ ದಂಪತಿಗಳು ತಕ್ಕಮಟ್ಟಿಗೆ ಸೌಖ್ಯದಿಂದ ಬಾಳುವೆ ಮಾಡಿಕೊಂಡು ಇದ್ದರು. ಆದರೆ ಚಿಂತೆಯಿಲ್ಲದವರು ಅಪರೂಪ ಎಂಬ ಮಾತು ಪ್ರಕೃತಿಯ ನಿಯಮವೇ ಇರುವದೇನೋ ಎಂಬಂತೆ ಅಪ್ಪಯ್ಯ ದಂಪತಿಗ ಸಂತಾನವಿಲ್ಲದ ಚಿಂತೆಯು ಬಹುವಾಗಿ ಬಾಧಿಸುತ್ತಿತ್ತು. ಭಗವಂತನಲ್ಲಿ ಅನನ್ಯ ಭಕ್ತಿಯುಳ್ಳ ಅವರು ಮೊದಮೊದಲು "ಪರಮಾತ್ಮನ ಇಚ್ಛೆಇದ್ದಂತೆ ಆಗುವದು" ಎಂದು ವಿಷಯಕ್ಕೆ ತಾತ್ಸಾರವನ್ನೇ ಮಾಡಿದ್ದರು. ಬರಬರುತ್ತ ಆ ಧೈರ್ಯವು ಅವರಲ್ಲಿ ಉಳಿಯಲಿಲ್ಲ. ಪುತ್ರಪ್ರಾಪ್ತಿ ಆಗಲೆಂದು ಅನೇಕ ವ್ರತ, ಉಪವಾಸಗಳನ್ನು

ಮಾಡಹತ್ತಿದರು. ಏನೇ ಮಾಡಿದರೂ ಅವರ ಇಷ್ಟಾರ್ಥ ಪೂರ್ತಿ ಆಗಲಿಲ್ಲ. ವರ್ಷಗಳ ಮೇಲೆ ವರ್ಷಗಳು ಕಳೆದುಹೋದವು. ಅಪ್ಪಯ್ಯಭಟ್ಟರಿಗೆ ಸಂತಾನಲಾಭವಾಗಲಿಲ್ಲ. ದೇಹಕ್ಕೆ ವೃದ್ಧಾಪ್ಯವು ಬೆಳೆಯಹತ್ತಿದಂತೆ ಅವರ ಚಿಂತೆಯು ಪ್ರಬಲವಾಗಹತ್ತಿತು. ವೇದಾಂತ ತತ್ವಜ್ಞಾನಿಗಳಾದ ಅವರು "ಅಪುತ್ರಸ್ಯ ಗತಿರ್ನಾಸ್ತಿ" ಎಂಬ ಆರ್ಯೋಕ್ತಿಯಂತೆ ತಮ್ಮ ಆಚಾರ, ನಿಷ್ಠೆ ವಿದ್ಯೆ ಮತ್ತು ಅನುಷ್ಠಾನಗಳೆಲ್ಲವೂ ವ್ಯರ್ಥವಾಗುವದಲ್ಲಾ! ಮುಂದೆ ತಮ್ಮ ವಂಶಕ್ಕೆ ಉದ್ಧಾರವಿಲ್ಲ. ತಮಗೆ ಸದ್ಗತಿ ಇಲ್ಲ ಎಂದು ಸತಿಪತಿಯರಿಬ್ಬರೂ ಮರಮರನೇ ಮರಗುತ್ತಿದ್ದರು. ಅಪ್ಪಯ್ಯಭಟ್ಟರು ಪರಮೇಶ್ವರನಲ್ಲಿ ಅತ್ಯಂತ ಭಕ್ತಿಯುಳ್ಳವರು. ಆತನ ಪ್ರೀತ್ಯರ್ಥವಾಗಿ ಅನೇಕ ಪೂಜೆ, ಪುರಶ್ಚರಣ, ಜಪ, ಅನುಷ್ಠಾನಗಳನ್ನು ಮಾಡುತ್ತಿದ್ದರು. "ಇಷ್ಟಾದರೂ ಆ ಕೈಲಾಸ ನಾಥನು ತನ್ನ ಇಷ್ಟಾರ್ಥವನ್ನು ಪೂರ್ತಿಗೊಳಿಸಬಾರದೇಕೆ ?" ಎಂದು ಒಮ್ಮೊಮ್ಮೆ ರೇಗುತ್ತಿದ್ದರು. "ಪೂರ್ವಜನ್ಮದಲ್ಲಿ ಮಾಡಿದ ಯಾವದೋ ಪಾಪದ ಫಲವಾಗಿ ನಮಗೆ ಸಂತಾನವಾಗದ್ದಕ್ಕೆ ಆ ಪರಮಾತ್ಮನೇನು ಮಾಡ ಬೇಕು" ಎಂದು ಸಮಾಧಾನ ಹೇಳಿಕೊಂಡು ವ್ಯಾಕುಲಪಡುತ್ತಿದ್ದರು. ಹೀಗೆ ಚಿಂತೆ, ವ್ಯಾಕುಲ, ಸಿಟ್ಟು ಸಮಾಧಾನಗಳ ತಾಕಲಾಟದಲ್ಲಿ ಕಾಲಕ್ರಮಣ ನಡೆಯಿಸುತ್ತಿರಲು ಅಪ್ಪಯ್ಯಭಟ್ಟರು ಕೊನೆಗೆ ಒಂದು ನಿರ್ಧಾರಕ್ಕೆ ಬರಬೇಕಾ ಯಿತು. "ಸಂತತಿ ಇಲ್ಲದೇ ಆತ್ಮೋದ್ಧಾರವಿಲ್ಲ. ಮೋಕ್ಷವಿಲ್ಲ. ಶ್ರೇಷ್ಠವಾದ ವಿಪ್ರವರ್ಣದಲ್ಲಿ ಹುಟ್ಟಿ, ಅಧ್ಯಾತ್ಮಜ್ಞಾನವನ್ನು ಸಂಪಾದಿಸಿ, ಅದರಂತೆ ವರ್ತಿ ಸುತ್ತ ಬಂದರೂ ಕೇವಲ ಸಂತತಿ ಇಲ್ಲವೆಂಬ ನಿಮಿತ್ಯದಿಂದ ನನ್ನ ಜನ್ಮವು ವ್ಯರ್ಥವಾಗಬೇಕೇ ? ನಾನು ಅಧೋಗತಿಗೆ ಇಳಿಯಬೇಕೇ ? ಆಗದು ! ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಪುತ್ರಪ್ರಾಪ್ತಿ ವರವನ್ನು ಪಡೆಯುದ ವಿನಃ ಗತ್ಯಂತರವಿಲ್ಲ." ಎಂದು ನಿರ್ಧರಿಸಿ ತಪಶ್ಚರ್ಯಕ್ಕಾಗಿ ಮನೆಬಿಟ್ಟು ಹೊರಗೆ ನಡೆದರು.

ಹಿಂದೆ ವರ್ಣಿಸಲ್ಪಟ್ಟ ಮಹಿಮಾಪೂರ್ಣವೂ ಪಾವನವೂ ಪಾಪ ನಾಶಕವೂ ಆದ ಪಂಪಾಕ್ಷೇತ್ರದಲ್ಲಿ ಅಪ್ಪಯ್ಯಭಟ್ಟರು ಒಂದು ಗುಹೆಯನ್ನು ಆಶ್ರಯಿಸಿ, ತಪಸ್ಸು ಮಾಡಹತ್ತಿದರು. ಭೌತಿಕ ವಿಷಯಲಂಪಟರಾಗಿ, ಬಳಲುತ್ತಿರುವ ನಮಗೆ ಅಪ್ಪಯ್ಯಭಟ್ಟರು ಮಾಡಿದ ತಪಸ್ಸಿನ ವರ್ಣನೆಯನು

ಮಾಡುವ ಯೋಗ್ಯತೆಯು ಎಲ್ಲಿಂದ ಬರಬೇಕು? ಪೂರ್ವಕಾಲದ ಋಷಿ ಮುನಿಗಳು ತಪಸ್ಸು ಮಾಡಿದ್ದು ಹೇಗೋ ಹಾಗೆಯೇ ಇವರು ಮಾಡಹತ್ತಿದ ರೆಂದು ಮಾತ್ರ ನಾವು ಹೇಳಬಹುದು. ಒಟ್ಟಾರೆ ಅವರು ಹನ್ನೆರಡು ವರ್ಷ ಗಳ ದೀರ್ಘಕಾಲ ಪಂಪಾಪತಿ ಶ್ರೀವಿರೂಪಾಕ್ಷೇಶನನ್ನು ಕುರಿತು ಕಠಿಣತರ ವಾದ ತಪಸ್ಸನ್ನು ಮಾಡಿದರು. ಹೀಗೆ ಅತಿ ನಿಷ್ಠೆಯಿಂದ ತಪಸ್ಸು ಮಾಡು ತ್ತಿರಲು ಒಂದು ದಿವಸ ಶ್ರೀ ಪಂಪಾಪತಿ ವಿರೂಪಾಕ್ಷೇಶ್ವರನು ಅಪ್ಪಯ್ಯನವರಿಗೆ ಪ್ರತ್ಯಕ್ಷ ದರ್ಶನವಿತ್ತು ''ವತ್ಸಾ. ನಿನ್ನ ನಿಷ್ಠೆಗೆ ಮೆಚ್ಚಿದೆನು. ನೀನು ಬೇಡಿದ ವರವನ್ನು ಕೊಡುತ್ತೇನೆ, ಹೇಳು. ನಿನ್ನ ಮನಸ್ಸಿನ ಬಯಕೆಯನ್ನು ಪೂರೈಸುವೆನು" ಎಂದನು.

ಪರಮಾತ್ಮನ ದರ್ಶನವಾದ ಕೂಡಲೆ ಆ ತಾಪಸವರ್ಯನು ಹರ್ಷ ಭರಿತನಾದನು. ಕಣ್ಣಿನಲ್ಲಿ ಆನಂದಬಾಷ್ಪಗಳು ಉದುರಹತ್ತಿದವು. ಮೈಮೇಲೆ ರೋಮಾಂಚಗಳೆದ್ದವು. ಅನನ್ಯಭಾವದಿಂದ ಆತನನ್ನು ಪರಿಪರಿಯಾಗಿ ಪ್ರಾರ್ಥಿಸಿ ಪುನಃ ಪುನಃ ಆ ಪರಮಾತ್ಮನಿಗೆ ಸಾಷ್ಟಾಂಗ ನಮಸ್ಕಾರಮಾಡಿ ದನು ಮತ್ತು ಆ ಪರಮೇಶನ ನಿಜರೂಪವನ್ನು ಕಂಡಕೂಡಲೇ ಮೊದಲೇ ಆಧ್ಯಾತ್ಮಜ್ಞಾನಸಂಪನ್ನರಾದ ಅವರು ಪರವಶರಾಗಿ, ತಮ್ಮ ಮನಸ್ಸಿನ ನಿಜವಾದ ಅಪೇಕ್ಷೆಯನ್ನು ಮರೆತು, ಆ ಚಂದ್ರಮೌಳಿಯನ್ನು ಕಂಡು ಬೇಡಿ ಕೊಂಡಿದ್ದೇನೆಂದರೆ! ''ಹೇ! ಜಗತ್ಪತೇ, ಪ್ರತ್ಯಕ್ಷ ನಿನ್ನ ದರ್ಶನವಾದದ್ದಕ್ಕೆ ನಾನು ಧನ್ಯನಾದೆನು. ನನ್ನ ಪಾಪರಾಶಿಯೆಲ್ಲವೂ ಭಸ್ಮವಾಯಿತು ನಾನು ಪುನೀತನಾದೆನು. ಅದಕ್ಕಾಗಿ ಹೇ! ಗಂಗಾಧರನೇ ನಿನ್ನ ಈ ಸುಂದರರೂಪವು ನನ್ನ ನೇತ್ರದಲ್ಲಿ ಎಂದಿಗೂ ಅಳಿಯದೆ ಸ್ಥಿರವಾಗಿ ಉಳಿಯುವಂತೆ ಕರುಣಿಸು. ನಿನ್ನ ಮಹಿಮೆಯು ಮರೆಯದಂತೆ ವರವನ್ನು ದಯಪಾಲಿಸು. ಮತ್ತು ನಿನ್ನ ಭಕ್ತರ ಸೇವೆ ಸಹವಾಸಗಳು ನಿತ್ಯವೂ ಲಭಿಸುವಂತೆ ಕೃಪೆಮಾಡು. ಇದಕ್ಕೂ ಹೆಚ್ಚಿನದನೇನನ್ನೂ ಬಯಸಲಾರೆನು" ಎಂದು ಬೇಡಿಕೊಂಡನು

ನಿಜವಾಗಿ ಅಪ್ಪಯ್ಯಭಟ್ಟರು ತಪಸ್ಸು ಮಾಡಿದ್ದು ಸಂತಾನಪ್ರಾಪ್ತಿಯ ಉದ್ದಿಶ್ಯವಾಗಿ. ಆದರೆ ಪ್ರತ್ಯಕ್ಷ ಪರಮೇಶ್ವರನ ದರ್ಶನವಾದ ಮೇಲೆ ಅವರ ವಿಚಾರವು ಬದಲಾಯಿತು. ''ಶಿವನ ಕಂಡಮೇಲೆ ಯಮನ ಬಾಧೆ ಏಕೆ''ಎಂಬ ಗಾದೆಯಂತೆ ಪ್ರತ್ಯಕ್ಷ ಪರಮಾತ್ಮನನ್ನು ಕಂಡ ಮೇಲೆ ಪುತ್ರಪ್ರಾಪ್ತಿಯಂಥ

ಕಾಮಶಾಸನನೆ ಎಲ್ಲಿ ಉಳಿಯಬೇಕು? ಅದರಲ್ಲಿಯೂ ಅವರು ಆತ್ಮ ಜ್ಞಾನಿಗಳು. ಅಂತೆಯೇ ಯಾವ ಐಹಿಕ ಸುಖವನ್ನು ಅಪೇಕ್ಷಿಸದೇ ಭಕ್ತಿ, ಜ್ಞಾನ, ಮತ್ತು ನಿಷ್ಕಾಮ ಸೇವೆ ಸತ್ಸಂಗಗಳು ಲಭಿಸುವಂತೆ ವರ ಬೇಡಿದರು. ಆದರೆ ಸರ್ವಜ್ಞನಾದ ಸದಾಶಿವನಿಗೆ ಅಪ್ಪಯ್ಯಭಟ್ಟರ ಮನೋವಾಂಛಿತವು ತಿಳಿಯದೇ ಇರಲಿಲ್ಲ. ಅಲ್ಲದೆ ಲೋಕಕಲ್ಯಾಣಕ್ಕಾಗಿ ತಾನು ಲೀಲಾ ಮಾನುಷರೂಪಧಾರಿಯಾಗಿ ಭೂಮಿಯಲ್ಲಿ ಅವತರಿಸಬೇಕಾಗಿತ್ತು. ಅದಕ್ಕಾಗಿ ಯೋಗ್ಯಸ್ಥಾನದ ಅವಶ್ಯಕತೆ ಇತ್ತು. ಆದ್ದರಿಂದ "ವತ್ಸ! ಪ್ರತ್ಯಕ್ಷ ನನ್ನ ದರ್ಶನವಾದ ಕೂಡಲೆ ಮೋಹಪರವಶನಾಗಿ ನಿಜವಾದ ನಿನ್ನ ಮನೋ-ವಾಂಛಿತವನ್ನು ಮರೆತುಬಿಟ್ಟೆಯಾ? ಹೇಳು! ಹೇಳು!! ನಿಜವಾದ ನಿನ್ನ ಇಚ್ಛೆಯೇನು ಅನುಮಾನಿಸದೆ ಹೇಳು. ನಾನು ಅದನ್ನು ಪೂರೈಸಿಕೊಡುತ್ತೇನೆ" ಎಂದು ಹೇಳಲು ಅಪ್ಪಯ್ಯನವರು ದಿಗ್ಮೂಢರಾದರು. ವೃದ್ಧಾಪ್ಯದಲ್ಲಿ ಸಂತಾನವನ್ನು ಅಪೇಕ್ಷಿಸುವದು, ಅನುಚಿತವಾಗಲಿಕ್ಕಿಲ್ಲವಷ್ಟೇ ? ಎಂದು ವಿಚಾರದ ಗೊಂದಲದಲ್ಲಿ ಸಿಲುಕಿದರು. ಆದರೆ ಪರಮಾತ್ಮನಿಂದ ಯಾವ ಮಾತನ್ನೂ ಮರೆಮಾಡಲು ಶಕ್ಯವಿಲ್ಲ. ಎಂಬ ನಿರ್ಧಾರದಿಂದ ತಮ್ಮ ಹೃದಯವನ್ನೇ ಬಿಚ್ಚಿಹೇಳಹತ್ತಿದರು. "ಜಗತ್ಪತೇ, ಸರ್ವಜ್ಞನಾದ ನಿನ್ನೆದುರು ಯಾವ ಸಂಗತಿಯನ್ನಾದರೂ ಮುಚ್ಚಿಡಲು ಸಾಧ್ಯವಿದೆಯೇ? "ನಿಜವಾಗಿ ನಾನು. ಪುತ್ರಪ್ರಾಪ್ತಿಗಾಗಿ, ತಪಸ್ಸು ಮಾಡಹತ್ತಿದೆನು. ಆದರೆ ಪ್ರಭುವೇ ನನಗೆ ಎಂಬತ್ತೈದು ವರ್ಷ ವಯಸ್ಸಾಗಿದೆ. ಕಲ್ಯಾಣಕರಳಾದ ನನ್ನ ಪತ್ನಿಯು ಅರವತ್ತೈದು ವರ್ಷದವಳಿದ್ದಾಳೆ. ಉಭಯತರ ತಾರುಣ್ಯವು ಗತಿಸಿ, ಹೋಗಿದೆ. ಮುಪ್ಪಿನಿಂದ ನಮ್ಮ ದೇಹಗಳು ಸಿಥಿಲವಾಗಿವೆ. ಹೀಗಿರುವಾಗ ಪುತ್ರಪ್ರಾಪ್ತಿಯ ವರವನ್ನು ಹೇಗೆ ಕೇಳಲಿ?" ಎಂದರು. ಅವರ ಈ ಮಾತನ್ನು ಕೇಳಿ, ಶಂಕರನು ಹಸನ್ಮುಖನಾಗಿ "ವಿಪ್ರೋತ್ತಮನೇ ! ಚಿಂತಿಸಬೇಡ ನಿನ್ನ ಇಷ್ಟಾರ್ಥವನ್ನು ಪೂರ್ತಿಗೊಳಿಸುವೆನು. ಕೇಳು ಕಲಿಯುಗವು ಪ್ರಾಪ್ತವಾದ ಮೇಲೆ ಕೆಲವು ಕಾಲದಲ್ಲಿಯೇ, ಸನಾತನ ಧರ್ಮವು ಲಯವಾಗುವ ಪ್ರಸಂಗ ಬಂದಾಗ ಅದ್ವೈತ ಪಂಥವನ್ನೂ ಷಣ್ಮತಗಳನ್ನೂ ಸ್ಥಾಪಿಸುವದಕ್ಕಾಗಿ ನಾಲ್ವರು ಶಿಷ್ಯರೊಡನೆ ಶಂಕರಾಚಾರ್ಯ ಎಂಬ ಹೆಸರಿನಿಂದ ನಾನೇ ಭೂಮಿಯ ಮೇಲೆ ಅವತರಿಸಿದ್ದೆನು. ಅದರಂತೆಯೇ ಈಗಲಾದರೂ ದುಷ್ಟ

ಯವನರಿಂದ ದೊಡ್ಡ ದೊಡ್ಡ ದೇವಸ್ಥಾನಗಳೂ ದೇವಮೂರ್ತಿಗಳೂ ಬಹು ಸಂಖ್ಯೆಯಲ್ಲಿ ನಾಶವಾಗಿವೆ. ಪುಣ್ಯಕ್ಷೇತ್ರ, ತೀರ್ಥಗಳೂ ಭ್ರಷ್ಟಗೊಳಿಸಲ್ಪಟ್ಟಿರುವದರಿಂದ ಅಲ್ಲಿಯ ಪುಣ್ಯಾಂಶಗಳು ಲೋಪವಾಗಿವೆ ಅವೆಲ್ಲವುಗಳನ್ನು ಪುನರಪಿ ಉದ್ಧಾರಗೊಳಿಸಬೇಕಾಗಿದೆ. ಅಲ್ಲದೆ ನಿನ್ನ ಹೆಸರೂ ಜಗತ್ತಿನಲ್ಲಿ ಪ್ರಸಿದ್ಧಿಪಡೆಯಬೇಕಾಗಿದೆ. ಅದಕ್ಕಾಗಿ ವಿಪ್ರೋತ್ತಮನೇ ಕೇಳು ನಿನ್ನ ಬಯಕೆಯನ್ನು ಈಡೇರಿಸುವದಕ್ಕಾಗಿ, ಮತ್ತು ಧರ್ಮದ ಪುನರುದ್ಧಾರಕ್ಕಾಗಿ ನಾನೇ ಲೀಲೆಯಿಂದ ಮಾನುಷರೂಪಧಾರಿಯಾಗಿ ನಿನ್ನ ಮಗನಾಗುತ್ತೇನೆ." ಎಂದು ಹೇಳಿ ಪರಮೇಶ್ವರನು ಪುತ್ರದಾಯಕವಾದ ಫಲವೊಂದನ್ನು ಆ ದ್ವಿಜೋತ್ತಮನ ಕೈಗೆ ಕೊಟ್ಟು "ಈ ಫಲವನ್ನು ನಿನ್ನ ಪತ್ನಿಯು ಸೇವಿಸಲಿ, ನೀನು ಅಂಗಸ್ಪರ್ಶವನ್ನು ಮಾಡಬೇಡ." ಎಂದು ಹೇಳಿ ಅಂತರ್ಧಾನನಾದನು.

ಪರಮಾತ್ಮನಿಂದ ಫಲವನ್ನು ಸ್ವೀಕರಿಸಲ್ಪಟ್ಟವರಾಗಿ, ಅಪ್ಪಯ್ಯನವರು ಸ್ವಗ್ರಾಮವಾದ ಸೋಗಿಹಳ್ಳಿಗೆ ಬಂದು ತಮ್ಮ ಮನೆಯನ್ನು ಪ್ರವೇಶಿಸಿ, ಪತ್ನಿಗೆ ಎಲ್ಲ ವೃತ್ತಾಂತವನ್ನು ಹೇಳಿ, ಫಲವನ್ನು ಅವಳ ಕೈಯಲ್ಲಿತ್ತರು. ಆ ಸಾಧ್ವಿಶಿರೋಮಣಿಯಾದರೂ ಪತಿಯಂತೆ ಶಿವಭಕ್ತಿಪರಾಯಣಳಾದ್ದರಿಂದ ಪತಿಯ ಮಾತುಗಳನ್ನು ಕೇಳಿ ಬಹುಭಕ್ತಿಯಿಂದ ಶಿವಪಂಚಾಕ್ಷರ ಮಂತ್ರವನ್ನು ಜಪಿಸುತ್ತ ಆ ಫಲವನ್ನು ಭಕ್ಷಣ ಮಾಡಿದಳು ಕೂಡಲೆ ದೇಹದಲ್ಲಿ ವಿದ್ಯುತ್ಸಂಚಾರವಾದಂತಾಗಿ ಆ ಸಾಧ್ವಿಯು ಪತಿಯ ಸ್ಪರ್ಶವಿಲ್ಲದೆ ಗರ್ಭವನ್ನು ಧಾರಣಮಾಡಿದವಳಾದಳು. ದಿನಕ್ರಮದಂತೆ ಗರ್ಭವು ವೃದ್ಧಿಂಗತವಾಗತೊಡಗಿತು. ಗರ್ಭಿಣಿಯ ಲಕ್ಷಣಗಳೆಲ್ಲವೂ ಕ್ರಮದಿಂದ ತೋರಹತ್ತಿದವು. ಆ ಗ್ರಾಮದಲ್ಲಿಯೂ ಸುತ್ತುಮುತ್ತಲಿನ ಗ್ರಾಮಗಳಲ್ಲಿಯೂ ಜನತೆಯಲ್ಲಿ ಇದೊಂದು ಕುತೂಹಲದ ಮತ್ತು ಚರ್ಚೆಯ ವಿಷಯವಾಗಿತ್ತು. ಆದರೂ ಅಪ್ಪಯ್ಯಭಟ್ಟರ ಬಗ್ಗೆ ಜನರಲ್ಲಿ ಮೊದಲಿನಿಂದಲೂ ಇದ್ದ ಪೂಜ್ಯಭಾವನೆಯಿಂದ ಮತ್ತು ಕಳೆದ ಹನ್ನೆರಡು ವರ್ಷ ಪುಣ್ಯಕ್ಷೇತ್ರದಲ್ಲಿ ಅವರು ತಪಸ್ಸು ಮಾಡಿದ ಖ್ಯಾತಿ ಬೆಳೆದದ್ದರಿಂದ ಇದೆಲ್ಲವೂ ಆ ಪರಮೇಶ್ವರನ ಕೃಪೆಯ ಫಲವೆಂದು ಬಹು ಜನರು ಮನಗಂಡಿದ್ದರು.

ಹೀಗೆ ಅಪ್ಪಯ್ಯಜೋಯ್ಸರ ಪತ್ನಿಯು ಗರ್ಭವತಿಯಾದ ನಂತರ ಹತ್ತನೇ ಮಾಸವು ನಡೆಯುತ್ತಿರಲು ಒಂದು ದಿವಸ ಆ ಪಾವನಚರಿತ ದಂಪತಿಯರು ನಿತ್ಯದಂತೆ ಸಹಜವಾಗಿ ಸುಖನಿದ್ರೆಯಲ್ಲಿ ಮಲಗಿರಲು ಅಂದು ಅವರು ನಿದ್ರೆಯಿಂದ ಎಚ್ಚತ್ತಾಗ ತಮ್ಮೀರ್ವರ ಮಧ್ಯದಲ್ಲಿ ಕೋಟಿಸೂರ್ಯಪ್ರಕಾಶವನ್ನು ಬೀರುವಂಥ ಶಿಶುವೊಂದು ಉಲ್ಲಾಸದಿಂದ ಆಡುತ್ತಿರುವದನ್ನು ಕಂಡು ಅತ್ಯಂತ ಆನಂದಭರಿತರಾದರು. ಪ್ರಸವವೇದನೆಯಿಲ್ಲದೆ ಪ್ರಸೂತಲಕ್ಷಣಗಳೇನೂ ಕಾಣದೆ ಶಿಶು ಜನಿಸಿದ್ದನ್ನು ನೋಡಿ ಆ ಸಾಧ್ವಿಗೆ ಪರಮಾಶ್ಚರ್ಯವಾಯಿತು. ಆದರೆ ಪರಮಶಿವಭಕ್ತರಾದ ಅಪ್ಪಯ್ಯಭಟ್ಟರಿಗೆ ಇದೆಲ್ಲವೂ ಆ ಪಂಪಾನಾಥನ ಲೀಲೆ ಎಂದು ತಿಳಿದುಕೊಳ್ಳಲಿಕ್ಕೆ ತಡವಾಗಲಿಲ್ಲ. ಪ್ರತ್ಯಕ್ಷ ವಿರುಪಾಕ್ಷನೇ ಶಿಶುರೂಪವನ್ನು ಧರಿಸಿ ಭೂಮಿಗೆ ಇಳಿದುಬಂದಿರುವನೆಂದು ಮನಗಂಡು ಪರಮಾತ್ಮನನ್ನು ಅನನ್ಯಭಾವದಿಂದ ಸ್ತುತಿಸಿದರು. ಆದರೆ ಸ್ವಲ್ಪೇ ವೇಳೆಯಲ್ಲಿ ಪರಮಾತ್ಮನ ಮೋಹಮಾಯೆಯು ಅವರನ್ನು ಆವರಿಸಿದ್ದರಿಂದ ಅಪ್ಪಯ್ಯನವರು ಪುತ್ರವಾತ್ಸಲ್ಯದಿಂದ ಆ ಶಿಶುವನ್ನು ಎತ್ತಿ ಮುದ್ದಾಡಿದರು. ಹೀಗೆ ಎಲ್ಲರನ್ನೂ ಬೆರಗುಗೊಳಿಸುವಂತೆ ಅಪ್ಪಯ್ಯಜೋಯಿಸರ ತಪಃಪ್ರಭಾವದಿಂದಲೂ ಶ್ರೀವಿರುಪಾಕ್ಷೇಶ್ವರನ ಇಚ್ಛೆಯಿಂದಲೂ ಶಿಶುರೂಪ ತಾಳಿದ ಭಗವಂತನೇ ಬಿಷ್ಟೇಶನೆಂಬ ನಾಮದಿಂದ ಲೋಕದಲ್ಲಿ ಖ್ಯಾತಿ ಪಡೆದನು.

ಶ್ರೀ ಬಿಷ್ಟಪ್ಪಯ್ಯನವರ ಈ ಜನ್ಮರಹಸ್ಯವು, ಆಗಿನ ಬಹು ಜನರಲ್ಲಿ ಆಶ್ಚರ್ಯ, ಕುತೂಹಲ, ವಿಶ್ವಾಸ, ಭಕ್ತಿ, ಚೇಷ್ಟೆ, ಮತ್ತು ನಿಂದೆಗಳಿಗೆ ಅವರವರ ಸ್ವಭಾವಧರ್ಮದಂತೆ, ಕಾರಣವಾಗಿತ್ತು. ಕೆಲವರಿಗೆ ಅರವತ್ತೈದು ವರ್ಷ ವಯಸ್ಸಿನ ವೃದ್ಧೆಯು ಪ್ರಸೂತಳಾದದ್ದು ಮಹದಾಶ್ಚರ್ಯವೆನಿಸಿದ್ದರೆ, ಇನ್ನೂ ಕೆಲವರಿಗೆ ದೈವದಲ್ಲಿ ಪುತ್ರಸಂತಾನವಿಲ್ಲದಿದ್ದರೂ ಪರಮೇಶ್ವರನನ್ನು ಮೆಚ್ಚಿಸಿ, ಅಪ್ಪಯ್ಯನವರು ಸಂತಾನವನ್ನು ಪಡೆದದ್ದು ಕುತೂಹಲಕ್ಕೆ ಕಾರಣವಾಗಿತ್ತು ದೈವದಲ್ಲಿ ಇಲ್ಲದಿದ್ದರೂ ಪರಮಾತ್ಮನಲ್ಲಿ ಭಕ್ತಿಯುಳ್ಳವರಿಗೆ ಅಸಾಧ್ಯವಾದದ್ದು ಯಾವದೂ ಇಲ್ಲ; ಎಂದು ಭಾವಿಕರಲ್ಲಿ ಭಕ್ತಿ-ವಿಶ್ವಾಸಗಳು ಬೆಳೆಯಲಿಕ್ಕೆ ಕೆಲವರಿಗೆ ಕಾರಣವಾದರೆ ಮತ್ತೆ ಕೆಲವು ಜನ ನಿಂದಕರಿಗೆ ಇದರಲ್ಲಿ ಅಪ್ಪಯ್ಯನವರದು ಏನಾದರೂ ಕಾರಸ್ಥಾನ ಇರಬೇಕೆಂದೆನಿಸುತ್ತಿತ್ತು.

ಇನ್ನೂ ಕೆಲವರು ಅಪ್ಪಯ್ಯನವರು ಎಂಬತ್ತೈದು ವರ್ಷ ವಯಸ್ಸಿನ ವೃದ್ಧರಾದರೂ ಕಾಮವಾಸನೆಯು ಹೋಗಿರಲಿಲ್ಲ, ಎಂದು ಕುಚೇಷ್ಟೆ ಮಾಡುತ್ತಿದ್ದರು. ಹೀಗೆ ಅನೇಕ ಜನರು ಅನೇಕ ವಿಧವಾಗಿ ಈ ವಿಷಯವನ್ನು ಚರ್ಚಿಸಿಕೊಳ್ಳುತ್ತಿದ್ದರು. ನಮ್ಮ ವಾಚಕರಾದರೂ ಈ ವಿಷಯಕ್ಕೆ ವಿಚಾರದ ಗೊಂದಲದಲ್ಲಿ ಬಿದ್ದಿರಬಹುದು. ಆದರೆ ಕೇವಲ ತನ್ನ ಇಚ್ಛಾನುಮಾತ್ರದಿಂದ ಬ್ರಹ್ಮಾಂಡವನ್ನೇ ನಿರ್ಮಿಸಿ, ಅದು ಸುಗಮವಾಗಿ, ಸಾಗುವಂತೆ ಮಾಡಿದ ಆ ಪರಬ್ರಹ್ಮನಿಗೆ ಲೋಕಕಲ್ಯಾಣಕ್ಕಾಗಿ ಒಂದು ಶಿಶುವನ್ನು ನಿರ್ಮಿಸಿ, ಅಪ್ಪಯ್ಯನವರಿಗೆ ಕೊಟ್ಟಿದ್ದು ಮಹತ್ವದ್ದೇನೂ ಅಲ್ಲ. ಆದ್ದರಿಂದ ಶ್ರೀ ಬಿಷ್ಟಪ್ಪಯ್ಯನವರ ಅವತಾರವು ಅಪ್ಪಯ್ಯನವರ ತಪಃಪ್ರಭಾವ ಮತ್ತು ಶ್ರೀ ಪಂಪಾನಾಥನ ಇಚ್ಛೆ ಇವುಗಳಿಂದ ಪ್ರಭಾವಿತವಾಗಿದೆ. ಅಗ್ನಿದೇವನು ಯಜ್ಞಕುಂಡದಲ್ಲಿ ಪ್ರಕಟನಾಗಿ ನೀಡಿದ ಪಾಯಸವನ್ನು ಭಕ್ಷಿಸಿ ಕೌಸಲ್ಯೆಯು ನಿರ್ಗುಣಬ್ರಹ್ಮನಾದ ಶ್ರೀರಾಮನನ್ನು ಪಡೆದಂತೆ ಅಪ್ಪಯ್ಯಜೊಯಿಸರ ಪತ್ನಿಯು ಶ್ರೀವಿರುಪಾಕ್ಷೇಶ್ವರನು ಕೊಟ್ಟ ಫಲವನ್ನು ಭಕ್ಷಿಸಿ, ಶ್ರೀಬಿಷ್ಟಪ್ಪಯ್ಯನವರನ್ನು ಪಡೆದಳು.



## ಪ್ರಕರಣ ೩

# ಬಾಲಯೋಗಿ

ಬಿಷ್ಟಪ್ಪಯ್ಯನವರ ಬಾಲ್ಯವಾದರೂ ಲೋಕರೂಢಿಯಂತೆ ಸಾಗಿರಲಿಲ್ಲ. ಕಿರುಕುಳ ಆಟನೋಟಗಳಿಂದಲೂ ಮಾತು-ನಗೆಗಳಿಂದಲೂ ತಂದೆ, ತಾಯಿಗಳನ್ನು ಸಂತೋಷಗೊಳಿಸುತ್ತಿದ್ದರಷ್ಟೆ ವಿನಾ ಹೆಚ್ಚಾದ ಆಟಪಾಟಗಳಲ್ಲಿ ಮನಸ್ಸಿದ್ದವರಾಗಿರಲಿಲ್ಲ ದಿವಸದ ಬಹುತರ ವೇಳೆಯನ್ನು ಗಾಢವಾದ ನಿದ್ರೆಯಲ್ಲಾಗಲೀ ಸ್ತಬ್ಧರಾಗಿ ಕುಳಿತುಕೊಂಡಾಗಲಿ ಇಲ್ಲವೆ ತಂದೆಯವರು ಮಾಡುತ್ತಿರುವ ಸ್ತೋತ್ರಮಂತ್ರಗಳನ್ನು ಆಲಿಸಿ ಕೇಳುವಲ್ಲಾಗಲಿ ನಿತ್ಯ ಕಾಲ ಕಳೆಯುತ್ತಿದ್ದರು. (ಈ ವಿಷಯಕ್ಕೆ ಗ್ರಂಥಾಧಾರವಿಲ್ಲವಿದ್ದರೂ ಹಿರಿಯರು ಕಿರಿಯರಿಗೆ ಹೇಳಿಕೊಳ್ಳುತ್ತ ಬಂದಿರುವ ವಿಷಯವಿದು. ಅವರ ವಂಶಜರಲ್ಲಿಯೂ ಭಕ್ತರಲ್ಲಿಯೂ ತಿಳುವಳಿಕೆಯು ಮಾತಾಗಿದೆ.) ಈ ಮಾತಿನಲ್ಲಿ ಸತ್ಯಾಂಶವಿದೆ ಎಂದು ತಿಳಿದುಕೊಳ್ಳಲು ಯಾವ ಸಂದೇಹವೂ ಇರುವದಿಲ್ಲ. ಯಾಕಂದರೆ ಪ್ರತ್ಯಕ್ಷ ಶಿವಾವತಾರಿಗಳು ಲೋಕವ್ಯವಹಾರಕ್ಕೆ ಅಂಟಿಕೊಳ್ಳಬಹುದೇ ?

ಇವರ ಈ ತರಹೆವನ್ನು ಅರಿತುಕೊಂಡೋ ಏನೋ ಎನ್ನುವಂತೆ ಅಪ್ಪಯ್ಯನವವರು ಬಿಷ್ಟಪ್ಪಯ್ಯನವರಿಗೆ ಚಿಕ್ಕ ವಯಸ್ಸಿನಲ್ಲಿಯೇ ಉಪನಯನ ಸಂಸ್ಕಾರವನ್ನು ವಿಧಿಪೂರ್ವಕವಾಗಿಯೂ ಅತಿ ಸಂಭ್ರಮದಿಂದಲೂ ಜರುಗಿಸಿದರು. ಶ್ರೀ ಬಿಷ್ಟಪ್ಪಯ್ಯನವರಾದರೂ ತಮ್ಮ ಅವತಾರ ಕೃತ್ಯವನ್ನು ಪ್ರಾರಂಭಿಸಲಿಕ್ಕೆ ಲೋಕರೂಢಿಯಂತೆ ಸಂಸ್ಕಾರದ ಮಾರ್ಗಪ್ರತೀಕ್ಷೆಯನ್ನೇ ಮಾಡುತ್ತಿದ್ದರೋ ಎನ್ನುವಂತೆ ಅವರು ಉಪನಯನವಾದ ಕೂಡಲೇ ಜ್ಞಾನಸಿದ್ಧಿಗಳನ್ನು ಪಡೆಯುವದಕ್ಕಾಗಿ ಅರಣ್ಯವನ್ನು ಸೇರಿ ಧ್ಯಾನಾಸಕ್ತರಾಗಿ ಕಾಲ ಕಳೆಯಹತ್ತಿದರು. ವಾಸ್ತವವಾಗಿ ಉಪನಯನ ಸಂಸ್ಕಾರವೆಂದರೆ ಜ್ಞಾನಸಂಪಾದಿಸಲು ಪ್ರಾರಂಭಿಸುವದಾಗಿದೆ. ಸನಾತನ ಹಿಂದೂ ಧರ್ಮದ

ಪ್ರಕಾರ ಉಪನಯನವಾದ ಕೂಡಲೆ ವಟುವು ಗುರುಕುಲಾಶ್ರಮದಲ್ಲಿ ವಾಸ ಮಾಡಿ ಗುರುಸೇವೆಯಲ್ಲಿ ಕಾಲಕಳೆದು ಜ್ಞಾನಾರ್ಜನೆ ಮಾಡಿಕೊಳ್ಳಬೇಕಾಗುತ್ತಿತ್ತು. ಆದರೆ ಶ್ರೀ ಬಿಷ್ಟಪ್ಪಯ್ಯನವರು ಯಾವ ಗುರುಗಳಲ್ಲಿಯೂ ಅಭ್ಯಾಸಕ್ಕಾಗಿ ಹೋಗಲಿಲ್ಲ. ಯಾಕಂದರೆ ಆ ಕಾಲದಲ್ಲಿ ಗುರುಕುಲಾಶ್ರಮಗಳು ಎಲ್ಲಿಯೂ ಇದ್ದಿರಲಿಲ್ಲ. ಅಲ್ಲದೆ ಶಿವಾವತಾರಿಗಳಾದ ಅವರಿಗೆ ಜ್ಞಾನೋಪದೇಶ ಮಾಡುವ ಋಷಿ-ಮುನಿಗಳಾದರೂ ಆಗ ಯಾರೂ ಇದ್ದಿರಲಿಲ್ಲ. ಆದರೂ ಅವರು ಲೋಕರೂಢಿಯಂತೆ ಕೆಲವು ಕಾಲವಾದರೂ ಜ್ಞಾನಾರ್ಜನೆಯಲ್ಲಿ ಕಳೆಯಬೇಕಾಗಿತ್ತು. ಅದಕ್ಕಾಗಿಯೇ ಅವರು ಗ್ರಾಮದ ಸಮೀಪದಲ್ಲಿ ಇರುವ ಅಡವಿಗೆ ಹೋಗಿ ತಪಸ್ಸು ಮಾಡಹತ್ತಿದರು. ಅವರು ನಿತ್ಯದಲ್ಲಿ ಇಡೀ ಹಗಲು ಮತ್ತು ಸರಿ ರಾತ್ರಿಯ ವರೆಗೆ ಅಡವಿಯಲ್ಲಿ ಧ್ಯಾನಾಸಕ್ತರಾಗಿದ್ದು ಸರಿ ರಾತ್ರಿಯಲ್ಲಿ ಭೋಜನಕ್ಕಾಗಿ ಮನೆಗೆ ಬರುತ್ತಿದ್ದರು. ಮತ್ತು ಊಟವಾದ ಕೂಡಲೆ ಪುನಃ ಅರಣ್ಯಕ್ಕೆ ತೆರಳುತ್ತಿದ್ದರು. ಈ ಪ್ರಕಾರ ನಿತ್ಯವೂ ಅವರ ಕ್ರಮ ನಡೆದಿತ್ತು.

ಯಾವದಾದರೂ ಹೊಸ ವಿಷಯವು ಪ್ರಾರಂಭವಾದ ಕೂಡಲೆ ಜನಜಂಗುಳಿಯಲ್ಲಿ ಅದೊಂದು ಚರ್ಚೆಯ ವಿಷಯವಾಗುತ್ತದೆ. ಅದರಂತೆ ಬಿಷ್ಟಪ್ಪಯ್ಯನವರ ಈ ದಿನಚರಿಯು ಜನತೆಯಲ್ಲಿ ಚರ್ಚೆಯ ವಿಷಯವಾಗಿತ್ತು. ತಮ್ಮ ತಮ್ಮ ಗುಣಧರ್ಮದ ಪ್ರಕಾರ ಜನರು ಈ ವಿಷಯಕ್ಕೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದರು. ಅದರಲ್ಲಿಯೇ ನಿಂದಕರೂ, ಪೀಡಕರೂ ಆದ ಜನರು ಅವರ ಬಗೆಗೆ ಅಪಪ್ರಚಾರ ಮಾಡಲಿಕ್ಕೂ. ನಿಂದೆಯ ಮಾತುಗಳನ್ನು ಆಡಲಿಕ್ಕೂ, ಅವರ ಕಾರ್ಯದಲ್ಲಿ ತೊಂದರೆಯನ್ನುಂಟು ಮಾಡಲಿಕ್ಕೂ ಪ್ರಯತ್ನಿಸಹತ್ತಿದರು

ಒಂದು ದಿವಸ ಬಿಷ್ಟಪ್ಪಯ್ಯನವರು ನಿತ್ಯದಂತೆ ಭೋಜನಕ್ಕಾಗಿ ಸರಿ ರಾತ್ರಿಯಲ್ಲಿ ಗ್ರಾಮಕ್ಕೆ ಬಂದು ತಮ್ಮ ಮನೆಗೆ ನಡೆದರು. ಇದೇ ಸಮಯವನ್ನು ಕಾಯುತ್ತಿದ್ದ ಕೆಲವು ದುಷ್ಟರು ಊರ ಅಗಸಿಯ ಬಾಗಿಲಿಗೆ ಬಂದು ಊಟ ಮಾಡಿದ ಮೇಲೆ ನಿತ್ಯದಂತೆ ಬಿಷ್ಟಪ್ಪಯ್ಯನವರು ಅಡವಿಗೆ ಹೋಗುವ

ಕಾರ್ಯಕ್ಕೆ ವಿಘ್ನವನ್ನುಂಟು ಮಾಡುವ ಉದ್ದೇಶದಿಂದ ಅಗಿಸೆಯ ಬಾಗಿಲನ್ನು ಮುಚ್ಚಿ ಭದ್ರವಾದ ಕೀಲಿಯನ್ನು ಹಾಕಿ ರಾಜಮುದ್ರೆಯನ್ನು ಒತ್ತಿದರು. ಭೋಜನಾನಂತರ ಬಿಷ್ಟಪ್ಪಯ್ಯನವರು ಅರಣ್ಯಕ್ಕೆ ತೆರಳುವ ದಕ್ಕಾಗಿ ಅಗಸೇ ಬಾಗಿಲಿಗೆ ಬಂದು ನೋಡಲು ದ್ವಾರವು ಮುಚ್ಚಲ್ಪಟ್ಟಿತ್ತು. ಅದರಿಂದ ಅವರು ನಿಜಸಂಗತಿಯನ್ನು ಅರಿತವರಾಗಿ ಆನಂದದಿಂದ ಪರಮಾತ್ಮನ ಸ್ತೋತ್ರ ಮಾಡಹತ್ತಿದರು. ಸಾಮಾನ್ಯರಾದ ಮನುಷ್ಯರಿಗೆ ತಮ್ಮ ಕಾರ್ಯಕ್ಕೆ ಪ್ರತಿಬಂಧವಾಗಲೀ ಆತಂಕವಾಗಲೀ ಉಂಟಾದದ್ದು ಕಂಡರೆ ಖೇದ, ಆಶ್ಚರ್ಯ, ದ್ವೇಷ, ಸಿಟ್ಟು ಮೊದಲಾದ ಭಾವನೆಗಳು ಉಂಟಾಗುವದು ಸಹಜ. ಆದರೆ ಬಾಲಯೋಗಿ ಬಿಷ್ಟಪ್ಪಯ್ಯನವರಿಗೆ ಈ ಯಾವ ಭಾವನೆಗಳು ಉಂಟಾಗದೇ ಶಿವಸ್ತೋತ್ರದಲ್ಲಿ ಎಂಥ ಸಾಮರ್ಥ್ಯವಿದೆ. ಎಂಬುದನ್ನು ಜನರಿಗೆ ಮನವರಿಕೆ ಮಾಡಿಕೊಡುವ ಸುಸಂಧಿ ದೊರೆತದ್ದಕ್ಕೆ ಅವರಿಗೆ ಆನಂದವೇ ಆಯಿತು.

ಯಾ ನಿಶಾ ಸರ್ವ ಭೂತಾನಾಂ ತಸ್ಯಾಂಜಾಗ್ರತಿ ಸಂಯಮಿ. ಎಲ್ಲ ಪ್ರಾಣಿಗಳಿಗೂ ರಾತ್ರಿ (ಕತ್ತಲು) ಇದ್ದಾಗ ಅವರಿಗೆ (ಸ್ಥಿತಪ್ರಜ್ಞರಿಗೆ) ಜಾಗೃತಿ (ಬೆಳಕು) ಇರುತ್ತದೆ. ಎಂದು ಗೀತೆಯಲ್ಲಿ ಸ್ಥಿತಪ್ರಜ್ಞನ ಲಕ್ಷಣ ಗಳಲ್ಲಿ ಹೇಳಿದಂತೆ ಬಿಷ್ಟಪ್ಪಯ್ಯನವರ ಸ್ಥಿತಿಯೂ ಇತ್ತೆಂದು ಹೇಳಿಲಡ್ಡಿಯಿಲ್ಲ.

ಹೀಗೆ ಬಾಲಯೋಗಿ ಬಿಷ್ಟಪ್ಪಯ್ಯನವರು ಅತ್ಯಾನಂದಭರಿತರಾಗಿ ಪರಮೇಶ್ವರನ ಸ್ತೋತ್ರವನ್ನು ಮಾಡಹತ್ತಿದರು.

" ಶಂಭುವೇ ! ಕೃಪಾಸಾಗರನೇ ಸಚ್ಚಿದಾನಂದ ಮೂರ್ತಿಯೇ ದ್ವಾರವನ್ನು ಭೇದಿಸಲಿಕ್ಕೂ ನಾನು ಹೋಗಲಿಕ್ಕೂ ಅನುಕೂಲವಾಗುವಂತೆ ನನ್ನನ್ನು ಕರುಣಿಸು. ತ್ರಯಂತವೇದ್ಯ ಚರಿತನೇ ತಾಪತ್ರಯಗಳನ್ನು ನಾಶಗೊಳಿಸುವವನೇ ಷಟ್ಶಕ್ತಿಗಳನ್ನು ಆಶ್ರಯಿಸಿದವನೇ ಓಂ ನಮಃ ಶಿವಾಯ ಎಂಬ ಷಡಕ್ಷರ ಮಂತ್ರದಲ್ಲಿ ಪ್ರೇಮವುಳ್ಳವನೇ ಷಡಾದರಗಳಿಂದ ಪರಿ ಶೋಭಿತನೇ ಷಡಾನನ ಶ್ರೇಷ್ಠಗುರು ತಂದೆ)ವೇ ನಾದಬಿಂದುಕಲೆಯನ್ನು ಅರಿತವನೇ ನಾದಗಳ ಆಚೆಯಲ್ಲಿ ಇರತಕ್ಕವನೇ ನಾನಾ ರೂಪಗಳನ್ನು ಧರಿಸಿದವನೇ ನಾರಾಯಣನಿಗೆ ವರಪ್ರದಾನ ಮಾಡಿದವನೇ ನನ್ನನ್ನು ಈ ಸಂಕಟದಿಂದ ಪಾರುಮಾಡು.

ಪಂಚಭೂತಗಳಲ್ಲಿ ಅಂತರಾತ್ಮನಾಗಿರುವವನೇ, ಪಂಚಕೃತ್ಯಗಳಲ್ಲಿ ಪಾರಂಗತನೇ, ಪಂಚಬ್ರಹ್ಮ ಮುಖವುಳ್ಳವನೇ, ಪ್ರಪಂಚಾತೀತ ಮನಸುಳ್ಳವನೇ, ನನ್ನನ್ನು ರಕ್ಷಿಸು. ಅಷ್ಟಮೂರ್ತಿಯೇ ಮಹಾಮೂರ್ತಿಯೇ ದಿಪ್ತ ಮೂರ್ತಿಯೇ, ಅಮೂರ್ತನೇ (ನಿರಾಕಾರನೇ) ಸರ್ವಮೂರ್ತಿಯೇ ನನ್ನನ್ನು ಈ ಸಂಕಟದಿಂದ ಪಾರುಮಾಡು, ಮಹಾ ಮಾಯೆಯಲ್ಲಿ ವಿನೋದಪಡುವವನೇ ಮಹಾಭಯವನ್ನು ದೂರಮಾಡುವವನೇ. ಮಹಾಸೇನಾನಿಯ (ಷಣ್ಮುಖನ) ಪಿತನೇ, ಮಾಯಾ ಸಂಸಾರದಿಂದ ರಕ್ಷಿಸುವವನೇ ಪಾರುಮಾಡುವವನೇ ಹರಿಯ ದೃಷ್ಟಿಪುಷ್ಪದಿಂದ ಪೂಜಿಸಲ್ಪಡುವನೇ ಪುಷ್ಪದಂತನಿಗೆ (ಗಣಪತಿಗೆ) ಪರಪ್ರದನೆ ಚಂದ್ರಪುಷ್ಪವನ್ನು ಧರಿಸಿದವನೇ ಮನಸ್ಸೆಂಬ ಪುಷ್ಪದಿಂಡ ಪೂಜೆಗೊಳ್ಳುವವನೇ ಮೂವತ್ತಾರು ತತ್ವಸಮೂಹಗಳ ಪ್ರಸಾದ ನೀಡುವ ಮೂರ್ತಿಯೇ. ಪಂಚಾರ್ಣಮಂತ್ರಗಳನ್ನು ಅರಿತವನೇ ಪರಮೇಶ್ವರನೇ ನನ್ನ ಕಾಪಾಡು."

ಈ ಪ್ರಕಾರ ಶ್ರೀ ಬಿಷ್ಟಪ್ಪಯ್ಯನವರು ತಾವು ಪರಮಾತ್ಮನ ಕೃಪೆಯಿಂದ ದ್ವಾರವನ್ನು ಭೇದಿಸಿ ಹೊರಸಾಗಲು ಇಚ್ಛೆಯುಳ್ಳವರಾಗಿ ಪರಮಾತ್ಮನನ್ನು ಆತನ ಗುಣ, ಶಕ್ತಿ, ಸ್ವರೂಪ ಮುಂತಾದವುಗಳನ್ನು ವರ್ಣಿಸಿ ಅನನ್ಯಭಾವದಿಂದ ಪ್ರಾರ್ಥಿಸಲು ಅವರ ಪಾಂಡಿತ್ಯಪೂರ್ಣ ಮತ್ತು ಶಾಸ್ತ್ರೋಕ್ತವಾದ ಸ್ತೋತ್ರವನ್ನು ಆಲಿಸಿ ಅವರ ಭಕ್ತಿಗೆ ಮೆಚ್ಚಿ ಪರಮೇಶ್ವರನು ಬಿಷ್ಟಪ್ಪಯ್ಯನವರಿಗೆ ಗಮನಸೌಕರ್ಯಕ್ಕಾಗಿ, ಒಂದು ಜೋಡು ಪಾದುಕೆಗಳನ್ನೂ ಶತ್ರುಗಳ ಭಯನಿವಾರಣಕ್ಕಾಗಿ ಒಂದು ಬೆತ್ತವನ್ನೂ ಕೊಟ್ಟನು.

ಹೀಗೆ ಪರಮಾತ್ಮನಿಂದ ಪಡೆದುಕೊಂಡ ಪಾದುಕೆಗಳನ್ನು ಧರಿಸಿಕೊಂಡವರಾಗಿ ಬೆತ್ತದಿಂದ ದ್ವಾರವನ್ನು ಸ್ಪರ್ಶಿಸಲು ಅಗಸೇಬಾಗಿಲವು ಸಹಜವಾಗಿ ತೆರೆಯಲ್ಪಟ್ಟಿತು. ಕೂಡಲೇ ಶೀಘ್ರಗತಿಯಿಂದ ಕಾನನದೆಡೆಗೆ ಸಾಗಿದರು. ಅವರನ್ನು ಪೀಡಿಸಬೇಕೆಂಬ ದುರುದ್ದೇಶದಿಂದ ಅಗಿಸೇಬಾಗಿಲವನ್ನು ಭದ್ರಪಡಿಸಿ, ದೂರದಲ್ಲಿ ಮೋಜು ನೋಡಬೇಕೆಂದು ನಿಂತಿರುವ ದುಷ್ಟ ಜನರು ಈ ನಡೆದ ಸಂಗತಿಯನ್ನೆಲ್ಲ ಕಂಡು ಬೆರಗುಗೊಂಡರು. ಮತ್ತು "ಈ ಬಾಲಕನು ಸಾಮಾನ್ಯ ಮಾನವನಲ್ಲ; ದೇವತಾಪುರುಷನು ಈತನು ಹುಟ್ಟಿದಂದಿನಿಂದಲೂ ಹಲವು ಮಹಿಮೆಗಳನ್ನು ನೋಡುತ್ತ ಬಂದಿರು

ವೆವಾದರೂ ಈತನನ್ನು ಪರೀಕ್ಷಿಸುವದೂ ಪೀಡಿಸುವದೂ ಮಹಾಪರಾಧ" ಎಂದು ಅಂದುಕೊಳ್ಳುತ್ತ ತಮ್ಮ ತಮ್ಮ ಮನೆಗೆ ನಡೆದರು.

ದ್ವಾರವನ್ನು ಭೇದಿಸಿ ಹೊರಗೆ ಹೊರಟ ಶ್ರೀ ಬಿಷ್ಟಪ್ಪಯ್ಯನವರು ದೊಡ್ಡದಾದ ಒಂದು ಅಡವಿಯನ್ನು ಸೇರಿದರು ಮತ್ತು ಅಲ್ಲಿ ಮಹತ್ತರವಾದ ಒಂದು ವಟವೃಕ್ಷದ ಹೊದರಿನಲ್ಲಿ ಇದ್ದು ತಪಸ್ಸುಮಾಡಹತ್ತಿದರು. ನಿಂದಕರೂ, ಪೀಡಕರೂ, ದುಷ್ಟರೂ ಆದ ಜನರ ಸಂಪರ್ಕವೇ ಬೇಡವೆಂದು, ಭೋಜನಕ್ಕಾಗಿ ಮನೆಗೆ ಬರುವದನ್ನೇ ಬಿಟ್ಟು ಅಡವಿಯಲ್ಲಿಯೇ ದೊರೆವ ಕಂದಮೂಲಗಳನ್ನು ಭಕ್ಷಿಸಿ ಭಯಂಕರವಾದ ತಪಸ್ಸನ್ನಾಚರಿಸಹತ್ತಿದರು. ಅವರ ತಪಸ್ಸಿನ ಪ್ರಭಾವದಿಂದಲೋ ಪರಮಾತ್ಮನ ಇಚ್ಛೆಯ ಫಲವಾಗಿಯೋ ಅವರು ತಪಸ್ಸು ಮಾಡುತ್ತಿರುವ ವಟವೃಕ್ಷದ ಹೊದರಿನ ದ್ವಾರದಲ್ಲಿ ಒಳ್ಳೇ ತೇಜಸ್ವಿಗಳಾದ ಎರಡು ವ್ಯಾಘ್ರಗಳು ಶ್ರೀಬಿಷ್ಟಪ್ಪಯ್ಯನವರಿಗೆ ಪೀಡಕರಿಂದ ತೊಂದರೆ ಆಗಬಾರದೆಂದು, ದ್ವಾರಪಾಲಕತ್ವವನ್ನು ವಹಿಸಿಕೊಂಡಂತೆ ಇರುತ್ತಿದ್ದವು. ಈ ರೀತಿ ಬಾಲಯೋಗಿ ಬಿಷ್ಟಪ್ಪಯ್ಯನವರು ನಿಷ್ಠೆಯಿಂದ ತಪಸ್ಸನ್ನಾಚರಿಸಿ, ಸಿದ್ಧಿಯನ್ನು ಪಡೆದರು. ಮತ್ತು ಗುರುವಿಲ್ಲದಲೇ ತಪಸ್ಸಿನ ಪ್ರಭಾವದಿಂದ ಆತ್ಮಜ್ಞಾನವನ್ನು ಪಡೆದದ್ದರಿಂದ ಅವರು ಸ್ವಯಮೇವ ಜ್ಞಾನಿ ಎಂದು ಖ್ಯಾತಿ ಪಡೆದರು.

———

# ಪ್ರಕರಣ ೪

## ಗೃಹಸ್ಥಾಶ್ರಮ

ಹೀಗೆ ಹನ್ನೆರಡು ವರ್ಷ ತಪಸ್ಸುಮಾಡಿ ಸಿದ್ಧಿಯನ್ನು ಪಡೆದು ವಟವೃಕ್ಷದ ಹೊದರಿನಿಂದ ಹೊರಗೆ ಬಂದರು ಮತ್ತು ಪುಣ್ಯಾಕರವಾದ ಸ್ಥಳದಲ್ಲಿ ಒಂದು ತಿಂತ್ರಿಣೀವೃಕ್ಷದ ಹತ್ತರ ಒಂದು ಶಿವಲಿಂಗವನ್ನು ಸ್ಥಾಪಿಸಿ ಒಂದು ದೇವಾಲಯುವನ್ನು ಕಟ್ಟಿಸಿದರು. ಮತ್ತು ನಿತ್ಯ ಬ್ರಾಹ್ಮಣರಿಗೆ ಭೋಜನ ಸಮಾರಂಭವನ್ನು ನಡೆಸಿದರು. ಒಮ್ಮೆ ಬ್ರಾಹ್ಮಣರಿಗೆ ಹಾಲಿನ ಅಪೇಕ್ಷೆ ಆದದ್ದನ್ನು ತಿಳಿದು ಆ ಗ್ರಾಮದಲ್ಲಿ ಇರುವ ಹುಣಸೆಯ ಮರದಿಂದ ಹಾಲು ಸುರಿಸಿ ಬ್ರಾಹ್ಮಣರನ್ನು ತೃಪ್ತಪಡಿಸಿದರು.

**ಟಿಪ್ಪಣಿ:—** ಈ ಮೇಲ್ಕಾಣಿಸಿದ ವಿಷಯ ಶ್ರೀ ಬಿಷ್ಟೇಶರ ಚರಿತ್ರೆಯ ಮೊದಲನೆಯ ಸರ್ಗದಲ್ಲಿ ೫೭, ೫೮, ೫೯, ೬೦ ಈ ಶ್ಲೋಕಗಳ ಅನುವಾದ ವಿರುತ್ತದೆ. ಈ ಶ್ಲೋಕಗಳಲ್ಲಿ ಗ್ರಾಮಶಬ್ದದ ಉಲ್ಲೇಖ ಇರುವದಿಲ್ಲ. ವಟವೃಕ್ಷದ ಹೊದರಿನಿಂದ ಹೊರಗೆ ಬಂದ ಮೇಲೆ ಅದೇ ಪುಣ್ಯಾಕರವಾದ ಸ್ಥಳದಲ್ಲಿ ತಿಂತ್ರಿಣೀ ವೃಕ್ಷದ ಬುಡದಲ್ಲಿ ಶಿವಲಿಂಗವನ್ನುಸ್ಥಾಪಿಸಿದರೆಂದು ಇದ್ದ ವಿಷಯವೂ ಅಲ್ಲಿ ಬ್ರಾಹ್ಮಣ ಭೋಜನ ನಡೆಸಿದರು ಎಂಬ ವಿಷಯವು ಕಥಾ ಸಂದರ್ಭಕ್ಕೆ ಹೊಂದಿಕೊಳ್ಳುವದಿಲ್ಲ. ಮತ್ತು ಬ್ರಾಹ್ಮಣರ ಹಾಲಿನ ಅಪೇಕ್ಷೆಯನ್ನು ಪೂರೈಸಲಿಕ್ಕಾಗಿ ಪುರಸ್ಥಿತಂ ವೃಕ್ಷಂ (ಗ್ರಾಮದಲ್ಲಿ ಇರುವ ವೃಕ್ಷಕ್ಕೆ) ಎಂಬ ಉಲ್ಲೇಖವಿದೆ. ಇದರ ಮೇಲಿಂದ ಅವರು ವಟವೃಕ್ಷದಿಂದ ಹೊರಟು ಸ್ವಗ್ರಾಮಕ್ಕೆ ಬಂದರೆಂದೂ ಅಲ್ಲಿ ಗೃಹಸ್ಥಧರ್ಮದ ಪ್ರಕಾರ ಬ್ರಾಹ್ಮಣ ಭೋಜನಾದಿ ಕಾರ್ಯಗಳನ್ನು ಮಾಡಿದರೆಂದು ಊಹಿಸಲಡ್ಡಿ ಇಲ್ಲ. ಅದೇ ಪ್ರಕಾರ ಅವರ ಚರಿತ್ರೆಯಲ್ಲಿ ವಿವಾಹ ಮತ್ತು ಗೃಹಸ್ಥಾಶ್ರಮದ ಆಚರಣೆಯ ಬಗ್ಗೆಯೂ ಉಲ್ಲೇಖವಿಲ್ಲ. ಆದರೆ ಮುಂದೆ ಅವರ ಪತ್ನಿ ಮತ್ತು ಮಕ್ಕಳ ವಿಷಯವು ಚರಿತ್ರೆಯಲ್ಲಿ ಬಂದಿದೆ. ಅಂದಮೇಲೆ ಶ್ರೀ ಬಿಷ್ಟಪ್ಪಯ್ಯನವರು ವಿವಾಹಮಾಡಿಕೊಂಡು ಕೆಲವು ಕಾಲ ಗೃಹಸ್ಥ ಧರ್ಮವನ್ನು ಪಾಲಿಸಿದರೆಂದು

ತಿಳಿಯಲಿಕ್ಕೂ ಇದ್ದಿ ಇಲ್ಲ. ಕಾರಣ ಮುಂದಿನ ಕಥೆಯಲ್ಲಿ ಆ ವಿಷಯವನ್ನು ಊಹೆಯ ಆಧಾರದಿಂದ ಬರೆಯಲಾಗಿದೆ.

ವಟವೃಕ್ಷದ ಹೊದರಿನಿಂದ ಹೊರಟು ಶ್ರೀ ಬಿಷ್ಟಪ್ಪಯ್ಯನವರು ಸ್ವಗ್ರಾಮವಾದ ಸೋಗಿಗೆ ಬಂದರು. ಮನೆಯಲ್ಲಿ ಅಪ್ಪಯ್ಯಭಟ್ಟರು ತಪಸ್ಸಿನ ತೇಜದಿಂದ ಪ್ರಭಾವಿತನಾದ ಮಗನನ್ನು ಕಂಡು ಅತ್ಯಾನಂದಭರಿತರಾಗಿ ಪ್ರೇಮೋಲ್ಲಾಸಗಳಿಂದ ಆತನನ್ನು ಸ್ವಾಗತಿಸಿದರು. ಕೆಲವು ಕಾಲ ಆ ಪಿತಾ ಪುತ್ರರು ಸ್ವಗೃಹದಲ್ಲಿ ಸೌಖ್ಯವಾಗಿ ಕಾಲ ಕಳೆದ ನಂತರ ಅಪ್ಪಯ್ಯಭಟ್ಟರು ಸನಾತನ ಧರ್ಮಕ್ಕನುಸಾರವಾಗಿ ಮತ್ತು ತಮ್ಮ ವಂಶವೃದ್ಧಿಗಾಗಿ ಒಬ್ಬ ಸುಶೀಲಳಾದ ವಧುವಿನೊಡನೆ ಶ್ರೀ ಬಿಷ್ಟಪ್ಪಯ್ಯನವರ ವಿವಾಹವನ್ನು ಅತಿ ಉತ್ಸಾಹದಿಂದಲೂ ವಿಜೃಂಭಣೆಯಿಂದಲೂ ಜರುಗಿಸಿದರು. ಅಂದಿನಿಂದ ಶ್ರೀ ಬಿಷ್ಟಪ್ಪಯ್ಯನವರಾದರೂ ಗೃಹಸ್ಥಾಶ್ರಮಕ್ಕನುಸಾರವಾಗಿ ನಿತ್ಯ ಕರ್ಮಾನುಷ್ಠಾನಗಳನ್ನು ನಿಷ್ಠೆಯಿಂದ ಆಚರಿಸಹತ್ತಿದರು ಆ ಗ್ರಾಮದಲ್ಲಿ ಇದ್ದ ಒಂದು ವಿಶಾಲವಾದ ತಿಂತ್ರಿಣೀ (ಹುಣಸೆಯ) ವೃಕ್ಷದ ಕೆಳಗೆ ಒಂದು ಶಿವಲಿಂಗವನ್ನು ಸ್ಥಾಪಿಸಿ, ದೇವಾಲಯವನ್ನು ಕಟ್ಟಿಸಿದರು. ಮತ್ತು ಅದರ ಸಮೀಪದಲ್ಲಿಯೇ ಒಂದು ಬಾವಿಯನ್ನು ತೋಡಿಸಿ ಕಟ್ಟಿಸಿದರು. ಮತ್ತು ಆ ದೇವಸ್ಥಾನದಲ್ಲಿ ನಿತ್ಯಪೂಜೆ, ಅನುಷ್ಠಾನಾದಿಗಳನ್ನೂ ಬ್ರಾಹ್ಮಣ ಭೋಜನ ಅನ್ನಸಂತರ್ಪಣೆಗಳನ್ನೂ ನಡೆಯಿಸಹತ್ತಿದರು. ಗೃಹಸ್ಥಧರ್ಮದ ಮರ್ಮ, ಮಹತ್ವ, ಆಚಾರ, ವ್ರತ, ನಿಯಮಗಳು ಜನರಿಗೆ ತಿಳಿಯುವಂತೆಯೂ, ಆದರ್ಶವಾಗುವಂತೆಯೂ ಆಚರಣೆಯನ್ನು ಇಟ್ಟುಕೊಂಡು ಶ್ರೀ ಬಿಷ್ಟಪ್ಪಯ್ಯನವರು ಗೃಹಸ್ಥಾಶ್ರಮದಲ್ಲಿ ಕೆಲವು ಕಾಲ ಕಳೆದರು. ಅವರ ಪತ್ನಿಯವರಾದ ಲಕ್ಷ್ಮ್ಯಂಬೆಯವರಾದರೂ ಪತಿಗೆ ಒಪ್ಪುವಂತೆ ಸದಾಚಾರ ಸಂಪನ್ನರಾಗಿದ್ದರು. ಪತಿಯ ಪ್ರತಿಯೊಂದು ಕಾರ್ಯಗಳಲ್ಲಿಯೂ ಅವರು ಮನಃಪೂರ್ವಕವಾಗಿ ನೆರವು ನೀಡುತ್ತಿದ್ದರು. ಅವರ ಶೀಲ, ಆಚಾರ, ಪಾತಿವ್ರತ್ಯಗಳು ಆಗಿನ ಸದ್ಗೃಹಿಣಿಯರಿಗೆ ಆದರ್ಶವಾಗಿದ್ದವು. ಹೀಗೆ ಈ ಸತಿಪತಿಯರ ಇರವು ಸಜ್ಜನರಿಗೆ ನಿಂದೆಯ ವಿಷಯವಾಗಿತ್ತು. ಪ್ರತ್ಯಕ್ಷ ಪರಮಾತ್ಮನಲ್ಲಿ ಕೂಡ ಲೋಪದೋಷ ಕಲ್ಪಿಸಿ ನಿಂದಿಸುವ ನಿಂದಕರು ಶ್ರೀ ಬಿಷ್ಟಪ್ಪಯ್ಯನವರು

ಶಿವಾವತಾರಿಗಳೆಂದೂ ಮಹಿಮಾಶಾಲಿಗಳೆಂದೂ ಎಷ್ಟೋ ಸಲ ಮನಗಂಡಿದ್ದರೂ ಅವರಲ್ಲಿ ಇಲ್ಲದ ದೋಷಗಳನ್ನು ಕಲ್ಪಿಸಿ ನಿಂದಿಸುವ ಮತ್ತು ದ್ವೇಷಿಸುವ ಜನಕ್ಕೇನೂ ಕೊರತೆ ಇದ್ದಿಲ್ಲ.

ಹೀಗೆ ಗೃಹಸ್ಥಧರ್ಮದಲ್ಲಿ ಕೆಲವು ಕಾಲ ಕಳೆಯುತ್ತಿರಲು ಅವರಿಗೆ ಮೂವರು ಹೆಣ್ಣುಮಕ್ಕಳೂ ಒಬ್ಬ ಗಂಡು ಮಗನೂ ಹೀಗೆ ನಾಲ್ಕು ಸಂತಾನಗಳ ಲಾಭವಾಯಿತು. ಸಂತತಿ ಲಾಭಕ್ಕಾಗಿ ಅನೇಕ ವೃತ ಉಪವಾಸಗಳನ್ನು ಮಾಡಿ,ಮಾಡಿ, ನಿರಾಶರಾಗಿ ತಪಸ್ಸಿಗೆ ಹೋಗಬೇಕಾಗುವ ಪ್ರಸಂಗಬಂದರೂ ಸಂತಾನವನ್ನು ಕಾಣದ ಅಪ್ಪಯ್ಯನವರಿಗೆ ನಾಲ್ವರು ಮೊಮ್ಮಕ್ಕಳ ಸಹವಾಸವು ಅತ್ಯಂತ ಆನಂದಕರವಾಗಿತ್ತು ಮತ್ತು ತಂದೆಯವರ ಆನಂದೋತ್ಸವಗಳನ್ನು ಕಂಡು ಬಿಷ್ಟಪ್ಪಯ್ಯನವರಿಗೂ ಬಹಳ ಸಮಾಧಾನವೆನಿಸುತ್ತಿತ್ತು.

ನಿತ್ಯದಂತೆ ಬ್ರಾಹ್ಮಣಭೋಜನ ನಡೆದಾಗ ಒಂದು ದಿವಸ ಬ್ರಾಹ್ಮಣವೃಂದಕ್ಕೆ ಹಾಲಿನ ಅಪೇಕ್ಷೆ ಆಗಿರುವದೆಂದು ಬಿಷ್ಟಪ್ಪಯ್ಯನವರಿಗೆ ಜ್ಞಾನದೃಷ್ಟಿಯಿಂದ ತಿಳಿದುಬಂದದ್ದರಿಂದ ವಿಪ್ರೋತ್ತಮರನ್ನು ಸಂತೃಪ್ತಗೊಳಿಸುವದಕ್ಕಾಗಿ ಸಮೀಪದಲ್ಲಿದ್ದ ಒಂದು ಹುಣಸೇಮರಕ್ಕೆ ಹಾಲು ಕೊಡಲು ಆಜ್ಞಾಪಿಸಿದರು. ಕೂಡಲೆ ಆ ಮರದಿಂದ ಹಾಲು ಸುರಿಯಹತ್ತಿ ಪ್ರವಾಹವಾಗಿಹರಿಯಹತ್ತಿತು. ಬ್ರಾಹ್ಮಣರು ಕ್ಷೀರಪಾನದಿಂದ ತೃಪ್ತರಾದರು. ಅಂದಿನಿಂದ ಶ್ರೀ ಬಿಷ್ಟಪ್ಪಯ್ಯನವರು ಸಾಮಾನ್ಯ ಮಾನವರಲ್ಲ, ಮಹಾಯೋಗಿಗಳಾಗಿದ್ದಾರೆ ಎಂದು ಎಲ್ಲ ಕಡೆಗೂ ಜನರು ಹೊಗಳಹತ್ತಿದರು. ಆದರೆ ಗೂಬೆಗೆ ಸೂರ್ಯನ ಪ್ರಕಾಶವು ಅಸಹನೀಯವಾಗುವಂತೆ ದುಷ್ಟ ಜನರಿಗೆ ಸಜ್ಜನರ ಸ್ತುತಿಯು ಕಿವಿಯಲ್ಲಿ ಕಾದ ಎಣ್ಣೆ ಸುರುವಿದಂತಾಗುತ್ತದೆ. ಅದರಂತೆ ಸೋಗೀ ಗ್ರಾಮದಲ್ಲಿಯ ಕೆಲವು ಜನ ದುಷ್ಟರಿಗೆ ಬಿಷ್ಟಪ್ಪಯ್ಯನವರ ಸ್ತುತಿ, ಹೊಗಳಿಕೆಗಳು ಸಹನವಾಗದಂತಾದವು. ಅವರ ನಿತ್ಯದ ಆಚಾರ, ಪೂಜೆ, ವೃತ, ನೇಮಗಳು ಈ ದುಷ್ಟರೆಲ್ಲರಿಗೆ ಆಡಂಬರ ಅಹಂಕಾರಗಳೆಂದು ಕಾಣಿಸಹತ್ತಿದವು.

ಒಮ್ಮೆ ಈ ದುಷ್ಟ ಜನರೆಲ್ಲರೂ ಒಂದುಗೂಡಿ, ಬಿಷ್ಟಪ್ಪಯ್ಯನವರ ಪ್ರತಿಷ್ಠೆಯನ್ನು ಕುಗ್ಗಿಸುವದಕ್ಕಾಗಿ, ಅನೇಕ ರೀತಿಯಿಂದ ಹಂಚಿಕೆ

ಹಾಕಿದರು. ಯಾವ ಹಂಚಿಕೆಯೂ ಫಲಕಾರಿಯಾಗಲಿಲ್ಲ. ಕೊನೆಗೆ ಅವರನ್ನು ಕೊನೆಗೊಳಿಸಿಯೇ ಬಿಡಬೇಕೆಂದು, ಯೋಚಿಸಿದರು. ಆ ಪ್ರಕಾರ ಒಂದು ದಿವಸ ಆ ದುಷ್ಟರೆಲ್ಲರೂ ಒಂದುಗೂಡಿ ಏಕಾಂಗಿಯಾಗಿ ಹೊರಟಿದ್ದ ಬಿಷ್ಟಪ್ಪಯ್ಯನವರನ್ನು ಹಿಡಿದು ಕಲ್ಲು ತುಂಬಿದ ಗೋಣೀಚೀಲದಲ್ಲಿ ಹಾಕಿ ಬಾಯಿ ಕಟ್ಟಿ ಒಂದು ಹಾಳು ಬಾವಿಯಲ್ಲಿ ಒಗೆದುಬಿಟ್ಟರು. ದುಷ್ಟರು ಎಂಥ ಹೀನ ಕಾರ್ಯಗಳನ್ನು ಮಾಡಲಿಕ್ಕೂ ಹೇಸುವದಿಲ್ಲ. ಆದರೆ ಶಿವಭಕ್ತರು ಎಂಥ ಸಂಕಟ ಬಂದರೂ ಪಾರಾಗುತ್ತಾರೆ. ಬಿಷ್ಟಪ್ಪಯ್ಯನವರನ್ನು ದುಷ್ಟರು ಹಿಡಿದುಕೊಂಡಾಗಿನಿಂದಲೇ ಶಿವಸ್ತೋತ್ರ (ರುದ್ರಸೂಕ್ತ) ವನ್ನು ಪಠಿಸಲಿಕ್ಕೆ ಪ್ರಾರಂಭಿಸಿದ್ದರಿಂದ ಹಿಂದಕ್ಕೆ ಪ್ರಹ್ಲಾದನನ್ನು ಪರ್ವತದ ಮೇಲಿಂದ ಕೆಳಗೆ ಒಗೆದರೂ ಪುನಃ ಜೀವದಿಂದುಳಿದು ಮೇಲಕ್ಕೆ ಬಂದಂತೆ ಬಿಷ್ಟಪ್ಪಯ್ಯನವರು ಸಹಜವಾಗಿ ಮೇಲಕ್ಕೆ ಬಂದು ನಿಂತರು. ಇವನ್ನು ಕಂಡು ದುರ್ಜನರೆಲ್ಲರೂ ಖತಿಗೊಂಡು ಮುಖಭಂಗಿತರಾದರು. ಅಲ್ಲಿ ಕೂಡಿದ ಇನ್ನುಳಿದ ಭಾವಿಕ ಸಜ್ಜನರು, ಬಿಷ್ಟಪ್ಪಯ್ಯನವರ ಮಹಿಮೆಯನ್ನು ಕೊಂಡಾಡಿದವರಲ್ಲದೇ ಶಿವ ನಾಮದ ಮಹಿಮೆಯನ್ನು ಅರಿತುಕೊಂಡರು.

— —— —

# ಪ್ರಕರಣ ೫

# ಪವಾಡ ಪುರುಷ

ಸೋಗೀ ಗ್ರಾಮದಲ್ಲಿ ದುಷ್ಟಜನರಿಂದ ಪೀಡಿತರಾದ ಬಿಷ್ಟಪ್ಪಯ್ಯ ನವರು ಅವರ ಸಂಪರ್ಕವೇ ಬೇಡವೆಂದೂ ಮನಃಶುದ್ಧಿಯ ಸಲುವಾಗಿ ಅನುಷ್ಠಾನಕ್ಕೆ ಅನುಕೂಲವಾಗಬೇಕೆಂತಲೂ ಸಮೀಪದಲ್ಲಿರುವ '**ಹನಸಿ**' ಗ್ರಾಮಕ್ಕೆ ಹೋದರು. ಅಲ್ಲಿ ಗ್ರಾಮಾಧಿಕಾರಿಯನ್ನು ಕಂಡು, ಜನರ ಉಪದ್ರವದಿಂದ ರಹಿತವಾದ ಮತ್ತು ಜಪ ಧ್ಯಾನಾದಿ ಅನುಷ್ಠಾನಕ್ಕೆ ತಕ್ಕುದಾದಂಥ ಸ್ವಲ್ಪ ಸ್ಥಳವನ್ನು ದಾನವಾಗಿ ಕೊಡಬೇಕೆಂದು ಕೇಳಿಕೊಂಡರು. ಆಗ ಕ್ಷುದ್ರಬುದ್ಧಿಯ ಆ ಗ್ರಾಮಾಧಿಕಾರಿಯು "ನಿನ್ನಲ್ಲಿ ತಪಸ್ಸಿನ ಸಾಮರ್ಥ್ಯ ಇದ್ದರೆ ಈ ಗಳಿಗೆಯನ್ನು ನಡೆಯಿಸು. ಅದು ಎಷ್ಟು ಭೂಮಿಯಲ್ಲಿ ನಡೆದು ಹೋಗುವದೋ ಅಷ್ಟು ಭೂಮಿಯನ್ನು ನಿನಗೆ ದಾನವಾಗಿ ಕೊಡುತ್ತೇನೆ" ಎಂದು ಅಪಹಾಸ್ಯಮಾಡುವ ಇಚ್ಛೆಯಿಂದ ಹೇಳಿದನು. ಕ್ಷುಲ್ಲಕರ ವಿಚಾರಗಳೇ ಈ ತರಹದವು ಇರುತ್ತವೆ. ಅವರಿಗೆ ಸಾಧುಜನರೆಂದರೆ ತುಚ್ಛರಾಗಿ, ತೋರುತ್ತಾರೆ. ಸಾಧು ಜನರ ಯೋಗ್ಯತೆಯನ್ನಳಿಯುವ ಸಾಮರ್ಥ್ಯವು ಅವರಲ್ಲಿ ಹೇಗೆ ಬರಬೇಕು ?

ಬಿಷ್ಟಪ್ಪಯ್ಯನವರೆಂದರೆ ಗ್ರಾಮಾಧಿಕಾರಿಯು ತಿಳಿಗೇಡಿತನದ ಮಾತನ್ನು ಕೇಳಿ ಮೊದಲು ವಿಷಾದವೆನಿಸಿತಾದರೂ ಶಿವಭಕ್ತಿಯ ಬಲವನ್ನು ತೋರಿಸುವ ಸಮಯ ಪುನಃ ಪುನಃ ಒದಗಿ ಬರುತ್ತಿರುವದಕ್ಕಾಗಿ ಆನಂದಪಟ್ಟು ಭಕ್ತಿಯಿಂದ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸಿ, ಆ ಗಳಿಗೆಯನ್ನು ನೋಡಿದ ಕೂಡಲೇ ಅದು ಸರಿಯುತ್ತ ವಾಯುವೇಗದಿಂದ ಸಾಗಿ ಗ್ರಾಮಾಂತರವನ್ನು ದಾಟಿತು.

ಹಿಂದೆ ಎಂದೂ ಕಾಣದ ಈ ಪ್ರಕಾರವನ್ನು ಪುರವಾಸಿಗಳಾದ ಎಲ್ಲ ಜನರ ಸಮಕ್ಷಮದಲ್ಲಿ ನೋಡಿ ಅಭಿಮಾನಿಯಾದ ಆ ಗ್ರಾಮಾಧಿಕಾರಿಯು ಗಾಬರಿಯಾಗಿ ಬಿಷ್ಟಪ್ಪಯ್ಯನವರ ಚರಣಗಳಿಗೆ ಸಾಷ್ಟಾಂಗನಮಸ್ಕಾರಮಾಡಿ, "ಮಹಾ ಯೋಗಿಗಳೇ, ತಮ್ಮ ಮಹಿಮೆಯನ್ನರಿಯರಿಯದೇ ಮದಾಂಧನಾದ

ನಾನು ತಮಗೆ ಅಪಹಾಸ್ಯ ಮಾಡಿದೆನು ನನ್ನ ನೀಚ ಬುದ್ಧಿಗಾಗಿ ಕ್ಷಮಿಸ ಬೇಕು. ಮೂರು ಪಾದ ಭೂಮಿಯ ದಾನ ಬೇಡಿ, ಭಗವಾನ್ ವಾಮನನು ಬಲಿಚಕ್ರವರ್ತಿಯ ಗರ್ವವನ್ನು ಹರಣ ಮಾಡಿದಂತೆ ತಾವು ನಿರ್ಜೀವ ಗಳಿಗೆ ಯನ್ನು ನಡೆಯಿಸಿ ನನಗೆ ಬುದ್ಧಿ ಕಲಿಸಿದಿರಿ, ಮಹಾ ಮುನಿವರ್ಯರೇ ನನ್ನನ್ನು ಉದ್ಧರಿಸಬೇಕು." ಎಂದು ಅನನ್ಯಭಾವದಿಂದ ಬೇಡಿಕೊಂಡನು ಮತ್ತು ಗಳಿಗೆಯು ನಡೆದು ಹೋದಷ್ಟು ಭೂಮಿಯನ್ನು ದಾನವಾಗಿಕೊಟ್ಟು ಅವರನ್ನು ಸಂತೈಸಿದನು. ಹೀಗೆ ದಾನವಾಗಿ ಪಡೆದ ಭೂಮಿಯಲ್ಲಿ ಶಿವಲಿಂಗವನ್ನು ಸ್ಥಾಪಿಸಿ, ದೇವಾಲಯವನ್ನು ಕಟ್ಟಿಸಿದರು. ಅಲ್ಲಿ ನಿತ್ಯವೂ ಶಿವಧ್ಯಾನಾಸಕ್ತ ರಾಗಿ ನಿತ್ಯ ಅನುಷ್ಠಾನವನ್ನು ಮಾಡಹತ್ತಿದರು. ಹೀಗೆ ದಾನವಾಗಿ ಪಡೆದ **ಭೂಮಿಯು "ಗಳಿಗಿಮಾನ್ಯ"** ಎಂಬ ಹೆಸರಿನಿಂದ ಗುರ್ತಿಸಲ್ಪಡುತ್ತದೆ. ಮತ್ತು ಇಂದಿಗೂ ಅವರ ವಂಶಸ್ಥರಾದ ಮಹಾಪುರುಷ ಮನೆತನದವರ ಉಪ ಭೋಗದಲ್ಲಿ ಆ ಭೂಮಿಯು ಇರುತ್ತದೆ.

ಹೀಗೆ ಶ್ರೀ ಬಿಷ್ಟಪ್ಪಯ್ಯನವರು ಸೋಗಿ ಗ್ರಾಮವನ್ನೂ ತ್ಯಜಿಸಿ, ಹನಸೀ ಗ್ರಾಮದಲ್ಲಿ ಶಿವಧ್ಯಾನಾನುಷ್ಠಾನದಲ್ಲಿ ಕಾಲಕಳೆಯಹತ್ತಿದ ಸಮಯದಲ್ಲಿ ಪತಿ ಆಜ್ಞಾಧಾರಕಳಾದ ಶ್ರೀ ಲಕ್ಷ್ಮ್ಯಂಬೆಯವರು ಪತಿ ಆಜ್ಞೆಯಂತೆ ತಮ್ಮ ಮೂವರು ಹೆಣ್ಣುಮಕ್ಕಳೂ ಚಿಕ್ಕಬಾಲಕ ಶಿವಪ್ಪಯ್ಯ ಮತ್ತು ಮಾವ ಅಪ್ಪಯ್ಯನವರನ್ನು ಒಡಗೊಂಡು ಸೋಗೀ ಗ್ರಾಮದಲ್ಲಿಯೇ ಸೌಖ್ಯವಾಗಿ ಇರುತ್ತಿದ್ದರು. ಒಂದು ದಿವಸ ಅವರ ಹಿರಿಯ ಪುತ್ರಿ ಶಿವಗಂಗಾ ಹೆಸರಿನವಳು ಬಾವಿಗೆ ಹೋದಾಗ ಆಕಸ್ಮಾತ್ತಾಗಿ ಕಾಲುಜಾರಿ ಬಾವಿಯಲ್ಲಿ ಬಿದ್ದು ಮೃತ ಪಟ್ಟಳು. ಮಗಳ ಮರಣಕ್ಕಾಗಿ ಲಕ್ಷ್ಮ್ಯಂಬೆಯವರು ಬಹಳ ಶೋಕಿಸಿದರು. ಕೊನೆಗೆ ಯೋಗಿವರ್ಯರಾದ ತಮ್ಮ ಪತಿದೇವರ ಅನುಗ್ರಹವಾದರೆ, ತನ್ನ ಮಗಳು ಪುನಃ ಜೀವಿಸಬಹುದೆಂಬ ಆಶೆಯಿಂದ ಮಗಳ ಮೃತದೇಹವನ್ನು ಹೊರೆಸಿಕೊಂಡು ಹನಸಿಗ್ರಾಮಕ್ಕೆ ಪತಿಸನ್ನಿಧಿಗೆ ತಂದರು. ಪೂರ್ಣ ಸ್ಥಿತಪ್ರಜ್ಞರಾದ ಬಿಷ್ಟಪ್ಪಯ್ಯನವರು ಮಗಳ ಮೃತದೇಹ ಕಂಡು ನಿರ್ವಿಕಾರ ದಿಂದಲೇ ಇದೇನು ಎಂದು ಕೇಳಿದರು. ಶ್ರೀ ಲಕ್ಷ್ಮ್ಯಂಬೆಯವರು ಎಲ್ಲ ಸಂಗತಿಯನ್ನು ಅರುಹಿ ಮೃತಪಟ್ಟ ಮಗಳನ್ನು ಬದುಕಿಸಬೇಕೆಂದು ಪತಿ ದೇವರನ್ನು ಬಹುವಾಗಿ ಪ್ರಾರ್ಥಿಸಲು "ಸಾಧ್ವಿಯೇ ! ಎಲ್ಲವೂ ಪರಮಾತ್ಮನ

ಇಚ್ಛೆಯಿದ್ದಂತಾಗುತ್ತದೆ. ಅದಕ್ಕಾಗಿ ನಾವೇಕೆ ದುಃಖಿಸಬೇಕು ? ಒಂದು ವೇಳೆ ಪರಮಾತ್ಮನ ಅನುಗ್ರಹ ಪಡೆದು ಶಿವಗಂಗೆಯನ್ನು ಬದುಕಿಸಬಹುದಾದರೂ ಲೋಕವ್ಯವಹಾರಕ್ಕೆ ವಿರುದ್ಧವಾಗಿ ವರ್ತಿಸಿದಂತಾಗುತ್ತದೆ. ಕಾರಣ ನೀನು ದುಃಖವನ್ನು ಶಮನ ಮಾಡಿಕೊಳ್ಳುವದೇ ಒಳ್ಳೆಯದು" ಎಂದು ಹೇಳಲು "ಇಲ್ಲ! ಇಲ್ಲ! ಪತಿದೇವರೇ ಕರಳು ಕೊರೆಯುವ ಈ ದುಃಖವನ್ನು ಹೇಗೆ ಸಹಿಸಲಿ? ಈ ನನ್ನ ದುಃಖವನ್ನು ದೂರಮಾಡುವದು ತಮಗೆ ಅಸಾಧ್ಯವೇ? ಈ ವರೆಗೆ ಅನೇಕ ಅಗಾಧ ಕೃತಿಗಳನ್ನು ಮಾಡಿದವರಿಗೆ ಈ ಮಗುವನ್ನು ಬದುಕಿಸುವದು ತಮಗೆ ಅಸಾಧ್ಯವೇ! ದೇವಾ! ಅಪಮೃತ್ಯುವಿಗೆ ಗುರಿಯಾದ ಮಗಳನ್ನು ಬದುಕಿಸುವದರಲ್ಲಿ ವ್ಯವಹಾರಕ್ಕೆ ವಿರೋಧವು ಹೇಗಾಗುವದು ? ಕೃಪಾಸಾಗರರೇ ದಯವಿಟ್ಟು ನನ್ನ ಮಗಳಿಗೆ ಜೀವದಾನ ಕೊಡಬೇಕು" ಎಂದು ಪರಿಪರಿಯಿಂದ ಬೇಡಿಕೊಳ್ಳಲು ದಯಾಸಿಂಧುವಾದ ಆ ಮಹಾಯೋಗಿಗಳು ಯೋಗಬಲದಿಂದ ಮೃತಪಟ್ಟ ದೇಹವನ್ನು ನೋಡಲು ಶಿವಗಂಗೆಯು ನಿದ್ರಿಸಿದವರು ಎಚ್ಚತ್ತಂತೆ ಎದ್ದು ಕುಳಿತಳು. ಅದರಿಂದ ಹರ್ಷಭರಿತರಾದ ಲಕ್ಷ್ಮಾಂಬೆಯವರು ಪತಿದೇವರ ಚರಣಕ್ಕೆ ಅನನ್ಯಭಕ್ತಿಯಿಂದ ನಮಸ್ಕರಿಸಿ ಮಗಳನ್ನು ಕರೆದುಕೊಂಡು ಪುನಃ ಸೋಗೀ ಗ್ರಾಮಕ್ಕೆ ಹೊರಟು ಹೋದರು.

ಈ ಸಂಗತಿಯು ಕರ್ಣೋಪಕರ್ಣವಾಗಿ ಆ ಗ್ರಾಮದಲ್ಲಿ ಮತ್ತು ಸುತ್ತುಮುತ್ತಲಿನ ಹಳ್ಳಿಪಳ್ಳಿಗಳಲ್ಲಿ ಪಸರಿಸಿತು. ಜನರು ತಮ್ಮ ತಮ್ಮ ಮನೆಗಳಲ್ಲಿ ಮೃತರಾದವರ ಶವಗಳನ್ನು ತಂದು ಯೋಗಿವರ್ಯರ ಕೃಪೆಯಿಂದ ಪುನರ್ಜೀವಿಸಿಕೊಂಡು ಹೋಗಹತ್ತಿದರು. ಎಷ್ಟೋ ಅಸಾಧ್ಯ ರೋಗಿಗಳು ಯೋಗಿವರ್ಯರ ಕೃಪೆಯಿಂದ ರೋಗಮುಕ್ತರಾದರು. ಹೀಗೆ ದಿನದಿನಕ್ಕೆ ಜನರ ಸಂಪರ್ಕವು ಬೆಳೆಯಹತ್ತಿ ತಮ್ಮ ನಿತ್ಯಕರ್ಮಾನುಷ್ಠಾನಗಳಿಗೆ ಆತಂಕವಾಗಹತ್ತಿದ್ದರಿಂದ ಅವರು ಆ ಸ್ಥಾನವನ್ನು ತ್ಯಜಿಸಿ, ಸಮೀಪದಲ್ಲಿರುವ ಶ್ರೀಮಲ್ಲಿಕಾರ್ಜುನಬೆಟ್ಟಕ್ಕೆ (ಬೆಟ್ಟದ ಮಲ್ಲಪ್ಪನ ಗುಡ್ಡಕ್ಕೆ) ಹೋದರು.

ಅಲ್ಲಿ ಬಿಲ್ವವೃಕ್ಷಗಳಿಂದ ಪೂರಿತವಾದ ಪಾವನತರ ಸ್ಥಾನವನ್ನು ನೋಡಿ ಒಂದು ಶಿವಲಿಂಗವನ್ನು ಪ್ರತಿಷ್ಠಾಪನೆಮಾಡಿದರು. ಮತ್ತು ತಾವು ಸಮೀಪದ ಗುಹೆಯೊಂದರಲ್ಲಿ ವಾಸಮಾಡಹತ್ತಿದರು. ಭಸ್ಮರುದ್ರಾಕ್ಷಿಗಳಿಂದ ಭೂಷಿತರಾದ

ಅವರು ವಿಪುಲವಾಗಿರುವ ಬಿಲ್ವಪತ್ರಗಳಿಂದ ನಿತ್ಯವೂ ಲಿಂಗಾರ್ಚನೆ ಮಾಡಿ, ಗುಹೆಯಲ್ಲಿ ಧ್ಯಾನಾಸಕ್ತರಾಗಿ ಕಾಲಕಳೆಯಹತ್ತಿದರು. ಆ ನಿರ್ಜನ ಪ್ರದೇಶದಲ್ಲಿ ಅವರು ಶಿವಧ್ಯಾನಪರಾಯಣರಾಗಿ, ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂಬ ಅಷ್ಟಾಂಗ ಗಳಲ್ಲಿ ನಿರತರಾಗಿ ಶಿವಪಂಚಾಕ್ಷರ ಮಂತ್ರವನ್ನು ಜಪಿಸುತ್ತ ಬಹು ಕಾಲ ತಪಶ್ಚರ್ಯ ಮಾಡಿದರು. ಒಮ್ಮೆ ಸಮಾಧಿಯಿಂದ ಪರವಶರಾಗಿದ್ದಾಗ ಪರಮೇಶ್ವರನ ಆಜ್ಞಾನುಸಾರವಾಗಿ, ಆ ಪರ್ವತದ ಶಿಲೆಗಳನ್ನು ಯೋಗ ದೃಷ್ಟಿಯ ಬಲದಿಂದ ಮೃದುವಾದ ಭಸ್ಮರಾಶಿಯನ್ನುಂಟುಮಾಡಿದರು. ಆ ಭಸ್ಮದ ಸ್ಪರ್ಶಮಾತ್ರದಿಂದ ಸಕಲ ಪಾಪಗಳು ನಾಶವಾಗುವವು. ಪಿಶಾಚ ಬ್ರಹ್ಮರಾಕ್ಷಸಗಳು ಸಿಂಹವನ್ನು ಕಂಡು ಎಲ್ಲ ಮೃಗಗಳು ಓಡಿಹೋಗುವಂತೆ ದೂರಹೋಗುವವು. ಮುಂದೆ ಅಲ್ಲಿಯೇ ಅವರು ಕೆಲವು ಕಾಲ ಇದ್ದು ತಪಶ್ಚರ್ಯವನ್ನು ಮಾಡಹತ್ತಿದರು. ಈ ಭಸ್ಮವನ್ನು ಪ್ರತಿವರ್ಷವೂ ಅವರ ವಂಶಜರು ಈ ಸ್ಥಾನದಿಂದ ಒಯ್ದು ಉಪಯೋಗಿಸುತ್ತಾರೆ. ಮತ್ತು ತಮ್ಮ ಭಕ್ತಜನರಿಗೆ ಆಶೀರ್ವಾದರೂಪವಾಗಿ ಕೊಡುತ್ತಾರೆ. ಆ ಭಾಗದ ಎಲ್ಲ ಶೈವ ಬ್ರಾಹ್ಮಣರು ಇದೇ ಭಸ್ಮವನ್ನು ಧರಿಸುತ್ತಾರೆ. ಈ ಭಸ್ಮವು ಪಾವನವೂ ಕಲ್ಯಾಣಕರವೂ ಎಲ್ಲ ಪೀಡೆಗಳ ಪರಿಹಾರಕವೂ ಎಂದೂ ಭಕ್ತರು ಭಾವಿಸುತ್ತಾರೆ.



## ಪ್ರಕರಣ ೬

# ಕ್ಷೇತ್ರದೇವತೆಗಳ ದರ್ಶನ

ಶ್ರೀ ಬಿಷ್ಟಪ್ಪಯ್ಯನವರು ಬೆಟ್ಟದ ಮಲ್ಲಪ್ಪನ ಗುಡ್ಡದಲ್ಲಿದ್ದು ಅಲ್ಲಿ ಅನೇಕವಾದ ಲೋಕಪಾವನ ಕಾರ್ಯಗಳನ್ನು ಮಾಡಿದರು. ಅವುಗಳೆಲ್ಲ ವನ್ನೂ ಇಲ್ಲಿ ವರ್ಣಿಸಲು ತಕ್ಕ ಆಧಾರಗಳಿಲ್ಲದ್ದರಿಂದ ನಿರುಪಾಯುವಾಗಿದೆ. ಆದರೂ ಅಲ್ಲಿ ಸುತ್ತುಮುತ್ತಲಿನ ಪ್ರದೇಶದಲ್ಲಿ ಅವರ ಭಕ್ತರ ಮುಖದಿಂದ ಮತ್ತು ವಂಶಜರಿಂದ ಅವರು ಮಾಡಿದ ಇನ್ನೂ ಅನೇಕ ಪವಾಡಗಳನ್ನು ವರ್ಣಿಸಿ ಹೇಳಲಾಗುತ್ತವೆ. ಹೀಗೆ ಬಹು ಕಾಲ ಅಲ್ಲಿ ತಪಶ್ಚರ್ಯವನ್ನು ಮಾಡುತ್ತಿರಲು, ಒಂದು ದಿವಸ ಕೆಲವು ಜನ ಯತಿಗಳು ಆ ಸ್ಥಾನಕ್ಕೆ ಶ್ರೀ ಬಿಷ್ಟೇಶನ ದರ್ಶನಾರ್ಥವಾಗಿ ಬಂದರು. ಆ ಯತಿಗಳೆಂದರೆ ತುಂಗಭದ್ರಾ ನದಿಯ ದಂಡೆಯಲ್ಲಿ 'ದಕ್ಷಿಣ ಕಾಶಿ' ಎಂದು ಪುರಾಣಪ್ರಸಿದ್ಧವಾದ ಬಿದಿರ ಹಳ್ಳಿ (ವೇಣುಪಲ್ಲಿ)ಎಂಬ ಸ್ಥಳದಲ್ಲಿಯ ವಿಠ್ಠಲ, ನೃಸಿಂಹ, ಶ್ರೀ ರಾಮೇಶ್ವರ, ನಾರಾಯಣ ಸೋಮನಾಥ, ಮಲ್ಲಿಕಾರ್ಜುನ, ಶ್ರೀ ಶಂಕರ, ವೇಣಿಮಾಧದ ಮತ್ತು ಪ್ರೇತವಿಮೋಚನೆಯ ದೇವತೆಗಳು. ಈ ಎಲ್ಲ ದೇವತೆಗಳ ಮೂರ್ತಿ ಗಳು ಭಂಗಗೊಳಿಸಲ್ಪಟ್ಟವು. ದೇವಸ್ಥಾನಗಳು ಅಪವಿತ್ರವಾಗಿ ಮಾಡ ಲ್ಪಟ್ಟವು. ಅದರಿಂದ ಈ ಎಲ್ಲ ದೇವತೆಗಳು ಆ ಅಪವಿತ್ರವಾದ ಸ್ಥಳದಲ್ಲಿ ವಾಸವಾಗಿ ಇರಲಿಕ್ಕಾಗದ್ದರಿಂದ ಎಂದೆಂದಿಗೂ ಅಪವಿತ್ರವಾಗದಂಥ ತುಂಗ-ಭದ್ರಾ ಜಲದಲ್ಲಿ ವಾಸಮಾಡಿಕೊಂಡಿದ್ದರು.

ಪ್ರತ್ಯಕ್ಷ ವಿರುಪಾಕ್ಷನೇ ಬಿಷ್ಟೇಶನೆಂಬ ಹೆಸರಿನಿಂದ ಭೂಮಿಗೆ ಬಂದಿರುವ ನೆಂತಲೂ ಲೋಕೋದ್ಧಾರಕ್ಕಾಗಿ ಮಲ್ಲಿಕಾರ್ಜುನ ಬೆಟ್ಟದಲ್ಲಿ ತಪಸ್ಸು ಮಾಡುತ್ತಿರುವನೆಂತಲೂ ತಿಳಿದದ್ದರಿಂದ ಆ ಎಲ್ಲ ದೇವತೆಗಳ ಯತಿರೂಪು ವನ್ನು ಧಾರಣ ಮಾಡಿಕೊಂಡವರಾಗಿ ಬಿಷ್ಟೇಶರನ್ನು ಕಾಣಲು ಬಂದಿದ್ದರು. ಸರ್ವಾಂಗವೂ ಭಸ್ಮಲೇಪಿತವಾಗಿ ಕಂಠ ಕಂಕಣ, ಭುಜಗಳಲ್ಲಿ ರುದ್ರಾಕ್ಷ ಭೂಷಿತನಾದ ಆ ಮಹಾಯೋಗಿಯು ನಾಶಿಕಾಗ್ರದಲ್ಲಿ ದೃಷ್ಟಿಯನ್ನಿಟ್ಟು

ಶಿವಧ್ಯಾನದಲ್ಲಿ ತಲ್ಲೀನನಾಗಿ ಯೋಗಸಮಾಧಿಯಲ್ಲಿ ಇರುವದನ್ನು ಕಂಡು, ಯತಿರೂಪಧಾರಿಗಳಾದ ಆ ಎಲ್ಲ ದೇವತೆಗಳು ಸಂತೋಷಭರಿತರಾದರು ಸ್ವಲ್ಪ ಹೊತ್ತಿನಲ್ಲಿ ಯೋಗ ಸಮಾಧಿಯಿಂದ ವಿಮುಕ್ತರಾದ ಬಿಷ್ಟೇಶರು ತಮ್ಮ ಆಶ್ರಮಕ್ಕೆ ಅಕಸ್ಮಾತ್ತಾಗಿ ಬಂದ ಯತಿವರ್ಯರನ್ನು ಕಂಡು ಸಾನಂದದಿಂದ ಸ್ವಾಗತಿಸಿ, ಸತ್ಕರಿಸಿದರು ಮತ್ತು ಆಗಮಿಸಿದ ಕಾರಣವನ್ನು ಕೇಳಲಾಗಿ, "ಯೋಗಿವರ್ಯನೇ ನಾವು ನಿನ್ನನ್ನು ಕಾಣಲಿಕ್ಕಾಗಿಯೇ ಬಂದಿರುವೆವು. ನಾವೆಲ್ಲರೂ ಕ್ಷೇತ್ರವಾಸಿಗಳಾದ ದೇವತೆಗಳು. ಪರಮಪಾವನವಾದ ತುಂಗಭದ್ರಾ ದಡದಲ್ಲಿ ಕಾಶಿ, ರಾಮೇಶ್ವರಗಳ ಸಂಗಮವಾದಂತಿರುವ ವೇಣುಪಲ್ಲಿ, ರಂಗಾಪುರಗಳಲ್ಲಿ ಲೋಕ ಕಲ್ಯಾಣಕ್ಕಾಗಿ ಪರಮಾತ್ಮನ ಆಜ್ಞೆಯಂತೆ ವಾಸ ಮಾಡಿಕೊಂಡು ಇದ್ದೆವು ಈಗ ಮ್ಲೇಂಛರ ಉಪಟಳವು ಹೆಚ್ಚಾಗಿ ನಮ್ಮ ಸ್ಥಾನಗಳಲ್ಲಿ ಭ್ರಷ್ಟಾಚಾರ ನಡೆಯಿಸಿದ್ದರಿಂದ ಅವು ಅಪವಿತ್ರವಾಗಿವೆ. ನಮ್ಮ ವಿಗ್ರಹಗಳೂ ಮಂದಿರಗಳೂ ಉಧ್ವಸ್ತ ಮಾಡಲ್ಪಟ್ಟಿವೆ. ಆ ಅಪವಿತ್ರವಾದ ಸ್ಥಾನದಲ್ಲಿ ನಾವು ಇರದಂತಾಗಿದೆ. ಮತ್ತು ಆ ಸ್ಥಾನವನ್ನೇ ಬಿಟ್ಟು ನಮ್ಮ ನಮ್ಮ ನಿಜರೂಪದಲ್ಲಿ ಸೇರಬೇಕೆಂದರೆ ಸನಾತನವಾದ ಆ ಸ್ಥಾನದ ಮಹಿಮೆಯು ಇಲ್ಲದಂತಾಗುವದು. ಹೀಗೆ ವಿಚಾರ ದ್ವಂದ್ವದಲ್ಲಿ ಸಿಲುಕಿದವರಾಗಿ ಉಪಾಯಗಾಣದೆ ಪವಿತ್ರವಾದ ತುಂಗಭದ್ರಾ ಜಲದಲ್ಲಿ ವಾಸಮಾಡಿಕೊಂಡು ಇರುವೆವು. ನೀನು ಪ್ರತ್ಯಕ್ಷ ಶಿವಾವತಾರಿಯಾಗಿದ್ದು ಧರ್ಮೋದ್ಧಾರವೇ ಅವತಾರ ಕಾರ್ಯವಿರುವದರಿಂದ ನೀನು ನಮ್ಮ ಸ್ಥಾನಗಳನ್ನು ಪುನರುದ್ಧರಿಸಿ ಪಾವನಗೊಳಿಸಬೇಕು." ಎಂದು ಹೇಳಿಕೊಂಡ ಆ ದೇವತೆಗಳ ಮಾತು ಕೇಳಿ. ಬಿಷ್ಟಪ್ಪಯ್ಯನವರಿಗೆ ತಮ್ಮ ಅವತಾರ ಕೃತ್ಯದ ಸ್ಮರಣವಾಗಿ, ಕೂಡಲೇ ಆ ನಿರ್ಜನ ಪ್ರದೇಶವನ್ನು ತ್ಯಜಿಸಿ, ರಂಗಾಪುರಕ್ಕೆ ಬಂದು ಶ್ರೀ ನೃಸಿಂಹ ದೇವಾಲಯದಲ್ಲಿ ಧ್ಯಾನಸ್ಥರಾಗಿ ಕುಳಿತುಕೊಂಡರು.



# ಪ್ರಕರಣ ೭

# ಭಸ್ಮ ಮಹಿಮಾ ದೃಷ್ಟಾಂತ

ಶಿವೋಪಾಸಕರಿಗೆ ಭಸ್ಮಲೇಪನವು ಪರಮ ಪಾವನಕರವು ಎಂದು ತಿಳಿಯಲ್ಪಡುತ್ತದೆ. ಶ್ರೀ ಶಿವಲೀಲಾಮೃತದಲ್ಲಿಯೂ ಶ್ರೀಗುರು-ಚರಿತ್ರ ದಲ್ಲಿಯೂ ಈ ಭಸ್ಮದ ಮಹಿಮೆಯನ್ನು ಬಹಳವಾಗಿ ಹೇಳಲಾಗಿದೆ. ಹರಿ ಹರಾದಿ ದೇವತೆಗಳ ಕೇವಲ ನಾಮಸ್ಮರಣ ಮಾತ್ರದಿಂದಲೇ ದುಷ್ಟರೂ, ಪಾಪಿಗಳೂ, ಈ ಭವಸಾಗರದಿಂದ ಮುಕ್ತರಾಗುತ್ತಾರೆ. ಅದರಂತೆ ಭಸ್ಮ ಲೇಪನದಿಂದಲೂ ದುರಾತ್ಮರು ಪಾವನರಾಗುತ್ತಾರೆ. ಕೇವಲ ಶೈವರಿಗಷ್ಟೇ ಅದು ಪಾವನಕರವೆಂದು ತಿಳಿಯುವುದು ತಪ್ಪು. ಅಗ್ನಿಯು ತನ್ನ ಶಾಖವನ್ನು ಎಲ್ಲರಿಗೂ ಸಮಾನವಾಗಿಯೇ ಕೊಡತಕ್ಕದ್ದು. ಸೂರ್ಯನು ಎಲ್ಲ ಕಡೆಗೂ ಸರಿಯಾಗಿಯೇ ಬೆಳಕನ್ನು ಕೊಡತಕ್ಕವನು. ಅದರಂತೆಯೇ ಭಸ್ಮವು ಎಲ್ಲರನ್ನೂ ಪಾವನಗೊಳಿಸತಕ್ಕದ್ದೇ ಆಗಿರುತ್ತದೆ ಎಂಬ ಮಾತನ್ನು ಶ್ರೀ ಬಿಷ್ಟಪ್ಪಯ್ಯನವರು ತಮ್ಮ ಪವಾಡಗಳಿಂದ ಜನರಿಗೆ ತೋರಿಸಿಕೊಟ್ಟಿದ್ದಾರೆ.

ಶ್ರೀ ಬಿಷ್ಟಪ್ಪಯ್ಯನವರು ನೃಸಿಂಹ ದೇವಾಲಯದಲ್ಲಿ ಧ್ಯಾನಸ್ಥರಾಗಿ ಕುಳಿತಿರುವ ಸಮಯದಲ್ಲಿ ಆ ಗ್ರಾಮಾಧಿಪರೂ ಶ್ರೀಮದುತ್ತರಾದಿ ಮಠಾಧೀಶರೂ ತತ್ಕಾಲೀನ ಪೀಠಸ್ಥರೂ ಆದ ಮಾಧ್ವಯತಿ ಶ್ರೀ ಸತ್ಯಬೋಧ ಸ್ವಾಮಿಗಳು ತಮ್ಮ ಸರಂಜಾಮುದೊಡನೆ ಅಲ್ಲಿಗೆ ಆಗಮಿಸಿದರು. ಆಗ ಅವರ ಸೇವಕರು ತಮ್ಮ ಗುರುಗಳ ವಾಸಕ್ಕಾಗಿ ಶ್ರೀನೃಸಿಂಹ ದೇವಸ್ಥಾನವನ್ನು ಶುದ್ಧಪಡಿಸಲಿಕ್ಕೆಂದು ಬಂದಾಗ ಅಲ್ಲಿ ಧ್ಯಾನಸ್ಥರಾಗಿ ಕುಳಿತ ಶ್ರೀ ಬಿಷ್ಟಪ್ಪಯ್ಯ ನವರನ್ನು ಕಂಡು ಕೋಪಾವಿಷ್ಟರಾದರು. ಮತ್ತು ಅವರನ್ನೂ ಅವರು ಸರ್ವಾಂಗಕ್ಕೆ ಲೇಪಿಸಿಕೊಂಡ ಭಸ್ಮವನ್ನೂ ತುಚ್ಛತೆಯಿಂದಲೂ ಹೀನ ನುಡಿ ಗಳಿಂದಲೂ ನಿಂದಿಸುತ್ತ ದೇವಾಲಯದಿಂದ ಹೊರಗಟ್ಟಿದರು. ಅದರಿಂದ ಬಿಷ್ಟಪ್ಪಯ್ಯನವರು ಊರ ಹೊರಭಾಗದಲ್ಲಿರುವ ಒಂದು ಗೋದಲೆಯನ್ನು ಆಶ್ರಯಿಸಿ ಕುಳಿತುಕೊಂಡರು.

ಜ್ಞಾನದಿಂದಲೇ ಆಗಲಿ ಅಜ್ಞಾನದಿಂದಲೇ ಆಗಲಿ ಅಗ್ನಿಯನ್ನು ಸ್ಪರ್ಶಿಸಿದರೆ ಅದು ತನ್ನ ಸ್ವಭಾವಧರ್ಮದಂತೆ ಸುಡದೇ ಇರದಂತೆ ಆ ಮಾಧ್ವಯತಿಗಳ ಸೇವಕರು ಸಾಕ್ಷಾತ್ ಶಿವಸ್ವರೂಪಿಯರಾದ ಬಿಷ್ಟಪ್ಪಯ್ಯನವರನ್ನೂ ಅವರು ಲೇಪಿಸಿದ ಭಸ್ಮವನ್ನೂ ದೂಷಿಸಿದ ಪರಿಣಾಮವಾಗಿ ಸ್ವಲ್ಪ ಹೊತ್ತಿನಲ್ಲಿಯೇ ಆ ಮಾಧ್ವಯತಿಗಳ ಸರಂಜಾಮಿನಲ್ಲಿದ್ದ ಆನೆಗಳ ಕಣ್ಣು ಕಾಣದಂತಾದದ್ದು ತಿಳಿದು ಬಂದಿತು. ಆಗ ಶ್ರೀಸತ್ಯಬೋಧರು ತಮ್ಮ ಸೇವಕರನ್ನು ಕರೆಯಿಸಿ ವಿಚಾರಿಸಲಾಗಿ ಅವರು " ಇಲ್ಲಿ ಒಬ್ಬ ಸಾಧುವು ಸರ್ವಾಂಗಕ್ಕೂ ಭಸ್ಮವನ್ನು ಬಳಿದುಕೊಂಡು ಧ್ಯಾನಸ್ಥನಾಗಿ ಕುಳಿತಿದ್ದನು. ತಮ್ಮ ವಾಸದ ಅನುಕೂಲಕ್ಕಾಗಿ ನಾವು ಅವನನ್ನು ಹೊರಗಟ್ಟಿದೆವು. " ಎಂದು ಹೇಳಿದರು. ಆಗ ಯತಿಗಳು " ಆತನು ಸಾಮಾನ್ಯ ಸಾಧು ಅಲ್ಲ. ಭಸ್ಮ ರುದ್ರಾಕ್ಷಿಗಳಿಂದ ಭೂಷಿತನಾದ ಆ ಶಿವಸ್ವರೂಪಿಯು ಮಹಾ ಯೋಗಿಯಾಗಿರಬೇಕು ಕಾರಣ ಆತನಿದ್ದಲ್ಲಿಗೆ ಹೋಗಿ ನಿಮ್ಮ ಉದ್ಧಟ ವರ್ತನೆಗಾಗಿ ಕ್ಷಮೆಬೇಡಿ, ಗಜಾಂಧತ್ವವನ್ನು ನಿವಾರಿಸಲು ಭಸ್ಮವನ್ನು ಕೇಳಿಕೊಳ್ಳಿರಿ. '' ಎಂದು ಹೇಳಿದ ಕೂಡಲೆ ಆ ಸೇವಕರು ಶೀಘ್ರವಾಗಿ ಶ್ರೀ ಬಿಷ್ಟಪ್ಪಯ್ಯನವರನ್ನು ಹುಡುಕುತ್ತ ಅವರು ಇದ್ದಲ್ಲಿಗೆ ಬಂದು ಅವರನ್ನು ಬಹುಪರಿಯಾಗಿ ಪ್ರಾರ್ಥಿಸಿ, " ಸ್ವಾಮೀ ನಮ್ಮಿಂದ ಮಹಾ ಅಪರಾಧವಾಗಿದೆ, ತಮ್ಮ ಯೋಗ್ಯತೆಯನ್ನರಿಯದೆ ತಮ್ಮನ್ನೂ ಭಸ್ಮವನ್ನೂ ನಿಂದಿಸಿದ್ದಕ್ಕೆ ನಮ್ಮನ್ನು ಕ್ಷಮಿಸಬೇಕು ಮತ್ತು ಆನೆಗಳ ಅಂಧತ್ವವನ್ನು ಕಳೆಯುವದಕ್ಕಾಗಿ ಪರಮ ಪಾವನವಾದ ಭಸ್ಮವನ್ನು ದಯಪಾಲಿಸಬೇಕೆಂದು ಬೇಡಿಕೊಂಡರು. ಅವರ ಪ್ರಾರ್ಥನೆಯನ್ನು ಕೇಳಿ ದಯಾಮಯರಾದ ಬಿಷ್ಟೇಶರು ಭಸ್ಮವನ್ನು ಕೊಟ್ಟು ಕಳಿಸಿದರು ಅದರ ಲೇಪನದಿಂದ ಕ್ಷಣ ಮಾತ್ರದಲ್ಲಿ ಆನೆಗಳ ಕುರುಡು ಅಳಿಯಿತು. ಇದನ್ನು ತಿಳಿದ ಕೂಡಲೆ ಶ್ರೀಸತ್ಯಬೋಧ ಸ್ವಾಮಿಗಳು ಸಂತುಷ್ಟರಾಗಿ ಶ್ರೀಬಿಷ್ಟಪ್ಪಯ್ಯನವರನ್ನು ಕರೆಯಿಸಿ ಬಹಳವಾಗಿ ಸನ್ಮಾನಿಸಿ, ತಮ್ಮ ಉಂಬಳಿಯಲ್ಲಿಯ ಬಹುಭಾಗವನ್ನು ದಾನವಾಗಿ ಕೊಟ್ಟರು. ಅಂದಿನಿಂದ ಇವರ ಮನೆತನಕ್ಕೆ " **ಮಹಾಪುರುಷರು ಸಂಸ್ಥಾನ ರಂಗಾಪುರ** " ಎಂಬ ಹೆಸರು ರೂಢವಾಯಿತು. ಶ್ರೀ ಬಿಷ್ಟಪ್ಪಯ್ಯನವರಿಂದ ೯ನೇ ತಲೆಮಾರಿನವರಾದ ಮಹಾದೇವಪ್ಪಯ್ಯ ಇವರ ಕಾಲದ ವರೆಗೆ ಎಲ್ಲ ಲೆಕ್ಕ, ಪತ್ರ, ಕಾಗದಗಳು ಇದೇ

ಒಕ್ಕಣಿಕೆಯ ಹೆಸರಿನ ಮೇಲೆ ಇದ್ದದ್ದು ಅವರಲ್ಲಿಯ ಹಳೇ ದಪ್ತರುಗಳಲ್ಲಿ ನೋಡಲು ಶಿಗುತ್ತವೆ.

ಶ್ರೀನೃಸಿಂಹ ದೇವಾಲಯುವನ್ನು ಬಿಟ್ಟು ಹೋಗಿ ಬಿಷ್ಟಪ್ಪಯ್ಯನವರು ಧ್ಯಾನಸ್ಥರಾಗಿ ಕುಳಿತ ಗೋದಲೆ ಸ್ಥಳದ ಒಡೆಯುನನ್ನು ಕರೆಯಿಸಿ, ಆ ಸ್ಥಳವನ್ನು ತಮಗೆ ದಾನವಾಗಿ ಕೊಡಬೇಕೆಂದು ಕೇಳಿದರು. ಆಗ ಆ ಕಿರಾತನು ಮೊದಲೇ ಈ ಯೋಗಿವರ್ಯರ ಮಹಿಮೆಯನ್ನು ಅರಿತವನಾದ್ದರಿಂದ ವಿನಯದಿಂದ ನಮಸ್ಕರಿಸಿ " ಸ್ವಾಮೀ ಜನ್ಮಾಂಧನಾದ ನನ್ನ ಮಗನ ಕಣ್ಣು ಕಾಣುವಂತೆ ಕೃಪೆ ಮಾಡಿದರೆ ಈ ಸ್ಥಳವನ್ನು ದಾನವಾಗಿ ಕೊಡುವೆನಲ್ಲದೆ ಆಜನ್ಮ ತಮ್ಮ ಸೇವೆ ಮಾಡಿಕೊಂಡು ಇರುವೆನು " ಎಂದು ಹೇಳಿದನು. ಕೂಡಲೇ ಬಿಷ್ಟಪ್ಪಯ್ಯನವರು ಆ ಅಂಧಕನನ್ನು ಕರೆಯಿಸಿ ಭಸ್ಮವನ್ನು ಲೇಪಿಸಿದ ಕೂಡಲೆ ಅವನಿಗೆ ಕಣ್ಣು ಕಾಣಿಸಹತ್ತಿದವು. ಆ ಕಿರಾತನು ಬೆರಗಾಗಿ ಈ ಸಂಗತಿಯನ್ನು ಗ್ರಾಮಾಧಿಕಾರಿಗೆ ತಿಳಿಸಿ, ಆ ಮಹಾತ್ಮನಿಗೆ ಗೋದಲೆ ಇದ್ದ ಸ್ಥಾನವನ್ನು ದಾನವಾಗಿ ಕೊಡಿಸಿದನು. ಮುಂದೆ ಕೆಲವು ದಿವಸಗಳ ನಂತರ ಶ್ರೀ ಬಿಷ್ಟೇಶರು ಆ ಗ್ರಾಮದ ಅಧಿಕಾರಿಯನ್ನೂ ಪ್ರಮುಖರನ್ನೂ ಕರೆಯಿಸಿ ಅವರೆಲ್ಲರ ಸಮಕ್ಷಮ ಆ ಗೋದಲೆ ಇದ್ದ ಸ್ಥಾನವನ್ನು ಅಗಿಯಿಸಿ ನೆಲದಲ್ಲಿ ಮುಚ್ಚಿಕೊಂಡ ಒಂದು ದೇವಾಲಯ ಮತ್ತು ಪ್ರಾಚೀನ ಕಾಲದಲ್ಲಿ ಸ್ಥಾಪಿಸಲ್ಪಟ್ಟಿದ್ದ " ಶ್ರೀರಾಮೇಶ್ವರ " ಎಂಬ ಶಿವಲಿಂಗವನ್ನು ಹೊರಗೆ ತೆಗೆಸಿ ಎಲ್ಲರಿಗೂ ತೋರಿಸಿದರು. ಮತ್ತು ತಾವು ಆ ಶಿವಲಿಂಗವನ್ನು ನಿತ್ಯವೂ ಯಥಾ ವಿಧಿಯಿಂದ ಅರ್ಚಿಸಹತ್ತಿದರು.



# ಪ್ರಕರಣ ೮

## ಕ್ಷೇತ್ರಗಳ ಸ್ಥಾಪನಾಕಾರ್ಯ

ರಂಗಾಪುರದಲ್ಲಿ ಶ್ರೀರಾಮೇಶ್ವರ ದೇವಾಲಯದಲ್ಲಿ ಕೆಲವು ದಿವಸ ಧ್ಯಾನಾಸಕ್ತರಾಗಿ ಕಾಲ ಕಳೆದ ನಂತರ ಬಿದರಹಳ್ಳಿಯ ಕ್ಷೇತ್ರ ದೇವತೆಗಳ ಪ್ರಾರ್ಥನೆಯನ್ನು ಸ್ಮರಿಸಿ, ಕ್ಷೇತ್ರಸ್ಥಾನಗಳ ಜೀರ್ಣೋದ್ಧಾರದ ಕಾರ್ಯವನ್ನು ಪ್ರಾರಂಭಿಸಿದರು. ಮೊದಲು ತಾವು ವಾಸಿಸಿದ ಶ್ರೀರಾಮೇಶ್ವರ ದೇವಸ್ಥಾನವನ್ನು ವಿಸ್ತರಿಸಿ ಕಟ್ಟಿಸಿದರು. ನೃಸಿಂಹ ದೇವಾಲಯದಲ್ಲಿ ಶಿಲಾಮಂಟಪವನ್ನು ಕಟ್ಟಿಸಿದರು. ನಂತರ ವೇಣಾಪಲ್ಲಿಗೆ ಹೋಗಿ ಅಲ್ಲಿ ಶ್ರೀ ಅಶ್ವತ್ಥ ನಾರಾಯಣನ ಸ್ಥಾಪನೆ ಮಾಡಿ, ದೇವಾಲಯವನ್ನೂ ಕಲ್ಲಿನ ಮಂಟಪವನ್ನೂ ಕಟ್ಟಿಸಿದರು. ತುಂಗಭದ್ರಾ ನದಿಯ ತೀರದಲ್ಲಿ ಘಾಟ (ಪಾವಟಿಗೆ) ಕಟ್ಟಿಸಿ ಶ್ರೀನಾರಾಯಣನ ದೇವಸ್ಥಾನವನ್ನು ಕಟ್ಟಿಸಿದರು. ವಿಠ್ಠಲಪುರ ( ಈಗ ಶ್ರೀ ಬಿಷ್ಟೇಶರ ವಂಶಜರು ಇರುವ ಊರು ) ಎಂಬ ಪಟ್ಟಣದಲ್ಲಿ ಶ್ರೀವಿಠ್ಠಲ ಮೂರ್ತಿಯನ್ನು ಸ್ಥಾಪಿಸಿದರು. ಬಿದರಹಳ್ಳಿಯಲ್ಲಿ ಒಂದು ದೇವಾಲಯದಲ್ಲಿ ಸೋಮೇಶ್ವರ ಲಿಂಗವನ್ನು ಸ್ಥಾಪಿಸಿ ಶಿವಾಜ್ಞೆಯಂತೆ ಅಲ್ಲಿದ್ದ ಕಲ್ಲಿನ ಮಂಟಪವನ್ನು ಜೀರ್ಣೋದ್ಧಾರಗೊಳಿಸಿದರು. ಆ ಮೇಲೆ ರಂಗಾಪುರಕ್ಕೆ ಬಂದು ಶ್ರೀರಾಮೇಶ್ವರ ದೇವಸ್ಥಾನದಲ್ಲಿ ಪುನಃ ಕೆಲವು ದಿವಸ ಶಿವಾರ್ಚನೆ, ಅನುಷ್ಠಾನಾದಿಗಳಲ್ಲಿ ನಿರತರಾಗಿ ಇರಹತ್ತಿದರು. ಮುಂದೆ ಕೆಲವು ದಿವಸಗಳ ನಂತರ ವರದಾ ತುಂಗಭದ್ರಾ ನದಿಗಳ ಸಂಗಮದ ಹತ್ತರ ಇರುವ **ಗಳಗೇಶಪುರ** ( ಈಗಿನ ಗಳಗನಾಥ ) ಕ್ಕೆ ಹೋಗಿ, ತುಂಗಭದ್ರೆಯ ಧಡದಲ್ಲಿ ಘಾಟ **(ಪಾವಟಿಗೆ)**ವನ್ನು ಕಟ್ಟಿಸಿದರು. ನಂತರ ತುಂಗಭದ್ರಾ ನದಿಯ ಮಧ್ಯದಲ್ಲಿ ಇರುವ ನಡುಗಡ್ಡೆಯ ಪ್ರದೇಶವನ್ನು ಕಂಡು, ಅದು ಚ್ಯವನ ಮಹರ್ಷಿಗಳು ತಪಸ್ಸು ಮಾಡಿದ ಸ್ಥಾನವೆಂದು ಅರಿತು, ಅಲ್ಲಿ ಒಂದು **ಶಿವಲಿಂಗವನ್ನು** ಸ್ಥಾಪಿಸಿ, ಕೆಲವು ದಿವಸ ಇದ್ದು ಅನುಷ್ಠಾನವನ್ನು ಮಾಡಿದರು. ( ಅಲ್ಲಿ ಇಂದಿಗೂ ಜನರು ಶ್ರೀ ಬಿಷ್ಟಪ್ಪಯ್ಯನವರು ಸ್ಥಾಪಿಸಿದ ಶಿವಲಿಂಗ ಮತ್ತು ಅವರು ಅನುಷ್ಠಾನಕ್ಕೆ ಕುಳಿತ ಸ್ಥಾನವನ್ನು ತೋರಿಸುತ್ತಾರೆ. ಮತ್ತು ಇವರ

ವಂಶಸ್ಥರಾದ ಮೋಮುಂಡಿಯ ಇನಾಮದಾರ ಶ್ರೀ ಬಿಷ್ಟಪ್ಪಯ್ಯ ಮಹಾಪುರುಷ ರವರು ಪುಣ್ಯ ಪರ್ವಕಾಲಗಳಲ್ಲಿಯೂ ಶಿವರಾತ್ರಿ–ಶಿವದಿನಗಳಲ್ಲಿಯೂ ಇಲ್ಲಿಯ ಶಿವಲಿಂಗಕ್ಕೆ ಅಭಿಷೇಕ, ನೈವೇದ್ಯ ಬ್ರಾಹ್ಮಣ ಭೋಜನಾದಿ ಕಾರ್ಯಕ್ರಮ ಗಳನ್ನು ಜರುಗಿಸುತ್ತಾರೆ.

ಇಷ್ಟೆಲ್ಲ ಪುನರುಜ್ಜೀವನ ಕ್ಷೇತ್ರಗಳ ಸ್ಥಾಪನಾ ಕಾರ್ಯಗಳನ್ನು ಮಾಡಿ ಸಿದವರಾಗಿ ಶ್ರೀ ಬಿಷ್ಟಪ್ಪಯ್ಯನವರು ಸ್ವಗ್ರಾಮವಾದ ಸೋಗಿಗೆ ಹೋಗಿ ಅಲ್ಲಿ ತಮ್ಮ ಮನೆಯಲ್ಲಿ ಕೆಲವು ಕಾಲ ಸ್ವಸ್ಥರಾಗಿ ಕಾಲ ಕಳೆದರು. ಈ ಸಮಯ ದಲ್ಲಿಯೇ ತಮ್ಮ ಪುತ್ರನಾದ ಶಿವಪ್ಪಯ್ಯನಿಗೆ ವ್ರತಬಂಧ ( ಉಪನಯನ ) ಸಮಾರಂಭವನ್ನು ಕಾಲಕ್ಕನುಸಾರವಾಗಿ ಬಹು ವಿಜೃಂಭಣೆಯಿಂದ ಜರುಗಿಸಿ ದರು. ಅಂದಿನಿಂದ ಶಿವಪ್ಪಯ್ಯನವರಾದರೂ ವ್ರತ, ನೇಮ, ವಿದ್ಯಾಭ್ಯಾಸ, ಅನುಷ್ಠಾನಾದಿಗಳನ್ನು ಬಹು ದಕ್ಷತೆಯಿಂದಲೂ ನಿಷ್ಠೆಯಿಂದಲೂ ಮಾಡ ಹತ್ತಿದರು. ಸ್ವಲ್ಪ ದಿವಸಗಳಲ್ಲಿಯೇ “ ತಂದೆಯಂತೆ ಮಗ ” ಎಂದು ಖ್ಯಾತಿ ಪಡೆದರು.

ಇಲ್ಲಿಗೆ ಶ್ರೀಮದಾದ್ಯ ಬಿಷ್ಟಪ್ಪಯ್ಯನವರ ಚರಿತ್ರೆಯ
ಮೊದಲನೇ ಸರ್ಗ ಮುಗಿದುದು.

**ಶ್ರೀ ಬಿಷ್ಟೇಶಾರ್ಪಣಮಸ್ತು.**

---

# ೨ನೆಯ ಪ್ರಕರಣ

# ಶಿಷ್ಯೋತ್ತಮ ಗೋಣೀಸ್ವಾಮಿ

ಸೋಗೀಗ್ರಾಮದಲ್ಲಿ ಕೆಲವು ಕಾಲ ಇದ್ದು ಮಗನಿಗೆ ಉಪನಯನ ಸಂಸ್ಕಾರ ಕೊಟ್ಟವರಾಗಿ, ನಂತರ ಪುನಃ ತಮ್ಮ ಅವತಾರ ಕೃತ್ಯವನ್ನು ಮುಂದುವರಿಸುವದಕ್ಕಾಗಿ ಶ್ರೀ ಬಿಷ್ಟಪ್ಪಯ್ಯನವರು ಬಿದರಹಳ್ಳಿಗೆ ಬಂದು ಇರಹತ್ತಿದರು. ಆ ಕಾಲದಲ್ಲಿ ಬಿದರಹಳ್ಳಿ ಗ್ರಾಮದಲ್ಲಿ ವಾಸಿಸುತ್ತಿದ್ದ ದೈವಜ್ಞರ (ಜೊಯಿಸರ) ಮನೆಯಲ್ಲಿ ತ್ರಿವೇಣ್ಯಂಬಾ ಎಂಬ ನಾಮದ ಸುಶೀಲೆ ಸದಾಚಾರಳೂ, ದೇವ-ಬ್ರಾಹ್ಮಣರಲ್ಲಿ ಶ್ರದ್ಧೆಯುಳ್ಳವಳೂ ಆದ ಬಾಲಿಕೆ ಯೊಡನೆ ತಮ್ಮ ಮಗನಾದ ಶಿವಪ್ಪಯ್ಯನ ವಿವಾಹ ಸಮಾರಂಭವನ್ನು ಬ್ರಾಹ್ಮ್ಯವಿಧಿಯಿಂದ ಒಳ್ಳೇ ವಿಜೃಂಭಣೆಯಿಂದ ನೆರವೇರಿಸಿದರು.

ಶ್ರೀ ಬಿಷ್ಟಪ್ಪಯ್ಯನವರು ಬಿದಿರಹಳ್ಳಿಯಲ್ಲಿ ವಾಸವಾಗಿದ್ದ ಕಾಲದಲ್ಲಿ ಅಲ್ಲಿಯ ಶಿವಾಲಯದೊಳಗೆ ಒಬ್ಬ ಶೂದ್ರ (ವಾಲ್ಮೀಕಿ) ಸ್ತ್ರೀಯು ನಿತ್ಯ ಕಸಗೂಡಿಸಿ, ಸಾರಣಿ ಸಮ್ಮಾರ್ಜನಾದಿ ಕಾರ್ಯಗಳನ್ನು ಮಾಡುತ್ತಿದ್ದಳು. ಅವಳ ಸೇವಾಕಾರ್ಯ ಮತ್ತು ನಿಷ್ಠೆಯನ್ನು ನಿತ್ಯವೂ ನೋಡುತ್ತಿದ್ದ ಯೋಗಿವರ್ಯರು ಒಂದು ದಿವಸ ಆ ಶೂದ್ರ ಸ್ತ್ರೀಯಳಿಗೆ ''ನೀನು ಏತಕ್ಕಾಗಿ ಸೇವೆ ಮಾಡುತ್ತಿರುವೆ. ನಿನ್ನ ಇಚ್ಛೆ ಏನಿದೆ'' ಎಂದು ಕೇಳಲಾಗಿ ಅವಳು ''ಸ್ವಾಮೀ ನನ್ನ ಹಿರಿಯ ಮಗನು ಹುಟ್ಟುಕುರುಡನಾಗಿದ್ದಾನೆ. ಇನ್ನೊಬ್ಬ ಚಿಕ್ಕಮಗನು ಚೆನ್ನಾದ ಕಣ್ಣುಳ್ಳವನಿದ್ದಾನೆ. ಅಂಥ ಪುತ್ರನಿಗೆ ಚೆನ್ನಾಗಿ ಕಣ್ಣು ಕಾಣಿಸುವಂತೆ ಕರುಣಿಸಬೇಕು" ಎಂದು ಪ್ರಾರ್ಥಿಸಲು "ಆ ಪುತ್ರನನ್ನು ನನಗೆ ಕೊಟ್ಟುಬಿಡು" ಎಂದು ಹೇಳಲಾಗಿ ಆ ಸ್ತ್ರೀಯಳು "ಹೇಗಾದರೂ ಆಗಲಿ, ಮಗನ ಕಣ್ಣು ಕಾಣುವಂತಾದರೆ ಸಾಕು'' ಎಂದು ಅಂದುಕೊಂಡು ಕೊಂಡು ಗುರುಗಳ ಮಾತಿಗೆ ಒಪ್ಪಿಕೊಂಡು ತನ್ನ ಮಗನನ್ನು ಕರೆತಂದು ಅವರ ಚರಣಕ್ಕೆ ಅರ್ಪಿಸಿದಳು. ಕೂಡಲೇ ಯೋಗಿವರ್ಯರು ತಮ್ಮ ಯೋಗ ಸಾಮರ್ಥ್ಯದಿಂದ ಅಭಿಮಂತ್ರಿತವಾದ ಜಲವನ್ನು ಬಾಲಕನ ಮೇಲೆ ಸಿಂಚನ

ಮಾಡಲು ಆ ಬಾಲಕನ ಕಣ್ಣು ಕಾಣುವಂತಾದವು. ಅಂದಿನಿಂದ ಅವನು ಶ್ರೀ ಬಿಷ್ಟಪ್ಪಯ್ಯನವರ ಸೇವೆ ಮಾಡಿಕೊಂಡು ಅಲ್ಲಿಯೇ ಇರಹತ್ತಿದನು.

"ಶೂದ್ರರ ಸ್ಪರ್ಶ, ದರ್ಶನ ಇಷ್ಟೇ ಅಲ್ಲ ಅವರ ಧ್ವನಿ ಕೇಳಿದರೂ ಸಹ ಬ್ರಾಹ್ಮಣರು ಸ್ನಾನ ಮಾಡುತ್ತಾರೆ." ಎಂದು ಮುಂತಾಗಿ ಬ್ರಾಹ್ಮಣ ದ್ವೇಷಿಗಳು ಅಥವಾ ಟೀಕಾಕಾರರು ಅಪಪ್ರಚಾರ ಮಾಡುತ್ತಿರುವದು ಎಲ್ಲೆಡೆಯಲ್ಲಿಯೂ ಕೇಳಬರುತ್ತದೆ. ಆದರೆ ಬಿಷ್ಟಪ್ಪಯ್ಯನವರು ಶೂದ್ರ ಸ್ತ್ರೀಯಳಿಂದ ಸೇವೆ ಪಡೆದದ್ದೂ ಮತ್ತು ಶೂದ್ರ ಬಾಲಕನಲ್ಲಿ ತೋರಿಸಿದ ವಾತ್ಸಲ್ಯವೂ ಈ ಅಪಪ್ರಚಾರಕ್ಕೆ ಖಂಡನೆಯ ಉತ್ತರವಿದ್ದಂತೆ ಉದಾಹರಣೆ ಆಗಿದೆ. ವೇದವೇದಾಂಗ ಪಂಡಿತರೂ ನಿತ್ಯವೂ ಅನುಷ್ಠಾನ ನಿರತರೂ ಯೋಗಿಗಳೂ ಆದ ಶ್ರೀ ಬಿಷ್ಟಪ್ಪಯ್ಯನವರಿಗೆ ಶೂದ್ರ ಸ್ತ್ರೀಯಳ ಸೇವೆ ಶೂದ್ರ ಕುಮಾರನ ಶಿಷ್ಯತ್ವವೂ ತ್ಯಾಜ್ಯವೆನಿಸಲಿಲ್ಲ ಇದಕ್ಕೂ ಪೂರ್ವದಲ್ಲಿ ಸ್ವಾಮಿ ವಿದ್ಯಾರಣ್ಯರು ಸಹ ಶೂದ್ರರ ಉದ್ಧಾರಕ್ಕಾಗಿ ಶ್ರಮವಹಿಸಿದ್ದಾರೆ. ಅಂದಮೇಲೆ ಅಸ್ಪೃಶ್ಯೋದ್ಧಾರ, ಹಿಂದುಳಿದ ಜನಾಂಗದ ಸುಧಾರಣೆಯ ಪ್ರಶ್ನೆಯು ಎಂದಿನಿಂದಲೂ ನಮ್ಮ ಹಿರಿಯ ಸಜ್ಜನರ ವಿಚಾರದಲ್ಲಿ ಇಲ್ಲದೇ ಇರಲಿಲ್ಲ ಎಂಬುದು ಸ್ಪಷ್ಟವಾಗುತ್ತಿದೆ. ಅಲ್ಲದೇ "ಶೂದ್ರತ್ವವಾಗಲೀ ಅಸ್ಪೃಶ್ಯತ್ವವಾಗಲಿ ಜಾತಿಯನ್ನು ಅವಲಂಬಿಸಿ ಇರದೆ ಅಶೌಚ, ಅನೀತಿ, ಅತ್ಯಾಚಾರಗಳನ್ನವಲಂಬಿಸಿರುತ್ತವೆ." ಎಂದು ಯಕ್ಷಪ್ರಶ್ನೆಗಳಿಗೆ ಉತ್ತರ ಕೊಡುವಾಗ ಧರ್ಮರಾಜನು ಸ್ಪಷ್ಟಪಡಿಸಿದ್ದಾನೆ.

ಸಮಾಜದಲ್ಲಿ ಹಿಂದುಳಿದವರು, ಮುಂದುವರಿದವರು, ಹರಿಜನರು, ಗಿರಿಜನರು, ಸ್ಪೃಶ್ಯರು, ಅಸ್ಪೃಶ್ಯರು ಮತ್ತು ಪರಿಶಿಷ್ಟರು ಎಂಬ ಗುಂಪುಗಳನ್ನು ಕಲ್ಪಿಸಿ, ಅವರಿಗಾಗಿ ಎಲ್ಲಿಲ್ಲದ ಸವಲತ್ತುಗಳ ಆಶ್ವಾಸನಗಳನ್ನು ನೀಡುತ್ತ ಆಯಾ ಪಂಗಡಗಳು ಸಮಾಜದಲ್ಲಿ ಸ್ಥಿರವಾಗಿ ಉಳಿಯುವಂತೆ ಮಾಡುವಂಥ ಈಗಿನ ಸುಧಾರಣೆಗಳ ಭಾಸವನ್ನು ಮಾತ್ರ ತೋರಿಸುವ ರೀತಿಯನ್ನು ಬಿಟ್ಟು, ಇಡೀ ಸಮಾಜವನ್ನೆಲ್ಲ ಒಂದೇ ತರಹದ ರೀತಿ, ನೀತಿ, ಆಚಾರ, ವಿಚಾರಗಳಿಗಾಗಿ ಸಮಾನವಾದ ಶಿಕ್ಷಣವನ್ನುಕೊಟ್ಟು ಮಾನವತೆಯ ಹಕ್ಕು ಬಾಧ್ಯತೆಗಳು ಎಲ್ಲರಿಗೂ ಸಮಾನವಾಗಿ, ದೊರೆಯುವಂತಾದರೆ, ಸ್ವಲ್ಪೇ ಕಾಲದಲ್ಲಿ ಸಮಾಜದಲ್ಲಿಯ ಭಿನ್ನತೆ ಹೋಗಿ ಎಲ್ಲ ಸಮಾಜಗಳೂ

ಏಕರೂಪತೆಯನ್ನು ಹೊಂದುವಲ್ಲಿ ಸಂದೇಹವಿಲ್ಲ. ಪರಸ್ಪರ ಬಂಧು-ಭಾವ ರಾಷ್ಟ್ರಭಾವನೆ. ಸಮಾಜಹಿತ, ದೇಶದ ಉನ್ನತಿ ಇವೇ ಮೊದಲಾದ ವಿಷಯ-ಗಳನ್ನೊಳಗೊಂಡ ಶಿಕ್ಷಣವು ಸಾರ್ವತ್ರಿಕವಾಗಿ ಸಿಗುವಂತಾದರೆ, ತೀವ್ರದಲ್ಲಿ ನಮ್ಮ ರಾಷ್ಟ್ರ ಆದರ್ಶವಾಗುವಲ್ಲಿ ಸಂಶಯವಿಲ್ಲ.

'ಗೋಣಿ' ಎಂಬ ಹೆಸರಿನ ಆ ಶೂದ್ರ ಪುತ್ರನು ಕೆಲವು ಕಾಲ ಶ್ರೀ ಬಿಷ್ಟಪ್ಪಯ್ಯನವರ ಸೇವೆಯಲ್ಲಿ ಇರುತ್ತಿರಲು ಅವನು ಶ್ರೀಗುರು ಕೃಪೆಗೆ ಪಾತ್ರನಾದನು. ಅವನು 'ಗೋಣೀಸ್ವಾಮಿ" ಎಂದು ಜನರಲ್ಲಿ ಖ್ಯಾತನಾಮಕನಾದನು. ಪ್ರತಿನಿತ್ಯವೂ ಗುರುಗಳು ನದಿಯ ಮೇಲೆ ಪಾದಚಾರಿಯಾಗಿ ಚವನಾಶ್ರಮಕ್ಕೆ ಹೋಗುತ್ತಿರುವಾಗ ಗೋಣೀ ಸ್ವಾಮಿಯು ನೀರಿನ ಮೇಲೆ ಕಂಬಳಿಯನ್ನು ಹಾಸಿ ಅದರ ಮೇಲೆ ಕುಳಿತುಹೋಗುತ್ತಿದ್ದನು. ಹೀಗೆ ನಿತ್ಯವೂ ಅವನ ಕ್ರಮ ನಡೆದಿತ್ತು. ಈ ರೀತಿಯಾಗಿ ಗುರುಶಿಷ್ಯರ ಖ್ಯಾತಿಯು ಸುತ್ತುಮುತ್ತಲಿನ ಪ್ರದೇಶದ ಜನರಲ್ಲಿ ಹೆಚ್ಚಾಗಿ ಬೆಳೆಯಿತು. ಅದರಿಂದ ಅವರ ಹತ್ತರ ದಿನದಿನಕ್ಕೆ ಜನದಟ್ಟಣೆ ಹೆಚ್ಚಾಗಹತ್ತಿತು. ಅದರಿಂದ ತಮ್ಮ ನಿತ್ಯಾನುಷ್ಠಾನಕ್ಕೆ ತೊಂದರೆಯಾಗಹತ್ತಿದ್ದರಿಂದ ಶ್ರೀ ಬಿಷ್ಟಪ್ಪಯ್ಯನವರು ಶಿಷ್ಯೋತ್ತಮ ಗೋಣಿಯನ್ನು ಅನುಗ್ರಹಿಸಿ, ಅವನಿಗೆ ಬೇರೆ ಕಡೆಗೆ ಆಶ್ರಮ ಸ್ಥಾಪಿಸಿಕೊಂಡು ತನಗೆ ಪ್ರಾಪ್ತವಾದ ಯೋಗಸಾಮರ್ಥ್ಯದಿಂದ ಲೋಕ ಕಲ್ಯಾಣ ಮಾಡಬೇಕೆಂದು ಆಜ್ಞಾಪಿಸಿದರು. ಅ ಪ್ರಕಾರ ಗೋಣೀ ಸ್ವಾಮಿಯು ಬಿದಿರಹಳ್ಳಿಯ ಪೂರ್ವಕ್ಕೆ ಇದೇ ತುಂಗಭದ್ರಾನದಿಯ ದಂಡೆಯಲ್ಲಿ ಇರುವ ಗುಮ್ಮಗೋಳ ಎಂಬ ಸಣ್ಣ ಗ್ರಾಮದಲ್ಲಿ ಒಂದು ಮಠವನ್ನು ಸ್ಥಾಪಿಸಿಕೊಂಡು ಸ್ವಜಾತಿಯವರಿಗೆ ಮತ್ತು ಸೇವಕಜನರಿಗೆ ತನ್ನ ಯೋಗಸಾಮರ್ಥ್ಯದಿಂದ ಅವರವರ ಇಷ್ಟಾರ್ಥಗಳನ್ನು ಪೂರ್ತಿಗೊಳಿಸಹತ್ತಿದನು. ಹೀಗಾಗಿ ಗೋಣೀಸ್ವಾಮಿಯ ಖ್ಯಾತಿಯು ಎಲ್ಲ ಕಡೆಗೂ ಪಸರಿಸಿತು. ಭಕ್ತಜನರ ಸಂಖ್ಯೆ ದಿನದಿನಕ್ಕೆ ಬೆಳೆಯಹತ್ತಿತು. ಅವರು ಗೋಣೀ ಸ್ವಾಮಿಯನ್ನು ಬಹಳವಾಗಿ ಸ್ತುತಿಸಹತ್ತಿದರು, ಬಹು ಜನರು ಅವನ ಸೇವೆಗಾಗಿ ಬಂದು ನಿಂತರು. ಸ್ತುತಿಪ್ರಿಯನಾದ ಗೋಣೀಸ್ವಾಮಿಗೆ ತನ್ನ ಗುರುವಿಗಿಂತ ತನ್ನ ಮಹಿಮೆ ಹೆಚ್ಚು ಎಂದು ಅಹಂಕಾರ ಉತ್ಪನ್ನವಾಯಿತು. ಅದರ ಪರಿಣಾಮವಾಗಿ ತನ್ನ ಗುರುಗಳಿಗೆ ತನ್ನ ಯೋಗ ಸಾಮರ್ಥ್ಯವನ್ನು ತೋರಿಸಬೇಕೆಂದು

ಗುಮ್ಮಗೋಳದಿಂದ ಎಲ್ಲ ಜನರು ನೋಡುತ್ತಿರುವಂತೆ ಒಂದು ಉಗ್ರವಾದ ಹುಲಿಯನ್ನು ಹತ್ತಿಕೊಂಡು ಕೈಯಲ್ಲಿ ಒಂದು ಸರ್ಪವನ್ನು ಚಬಕವನ್ನಾಗಿ ಹಿಡಿದುಕೊಂಡು ಗುರುಸ್ಥಾನವಾದ ರಂಗಾಪುರದ ಕಡೆಗೆ ಸಾಗಿದನು. ಈ ಸುದ್ದಿಯನ್ನು ಅವನ ಶಿಷ್ಯರು ಶ್ರೀ ಬಿಷ್ಟಪ್ಪಯ್ಯನವರಿಗೆ ಮುಂಗಡವಾಗಿಯೇ ತಿಳಿಸಿ ಗೋಣೀಸ್ವಾಮಿಯನ್ನು ಬಹುಪರಿಯಿಂದ ಹೊಗಳಿದರು. ಆ ಸಮಯಕ್ಕೆ ಶ್ರೀ ಬಿಷ್ಟಪ್ಪಯ್ಯನವರು ಸಹಜವಾಗಿ ಒಂದು ಗೋಡೆಯ ಮೇಲೆ ಕುಳಿತುಕೊಂಡಿದ್ದರು. ಅಲ್ಲಿಂದಲೇ ದೂರದಲ್ಲಿ ಗೋಣಿಯು ಬರುತ್ತಿರುವದನ್ನು ಕಂಡು ತಾವು ಕುಳಿತಿರುವ ಗೋಡೆಗೇ ಗೋಣಿಗೆ ಎದುರು ಹೋಗುವದಕ್ಕಾಗಿ ಮುಂದೆ ಸಾಗಲು ಆಜ್ಞೆ ಮಾಡಿದರು. ಕೂಡಲೇ ಗೋಡೆಯು ಮುಂದೆ ಸಾಗಹತ್ತಿತು. ಈ ಚಮತ್ಕಾರವನ್ನು ದೂರದಿಂದಲೇ ಕಂಡ ಗೋಣೀ ಸ್ವಾಮಿಯು ಮುಖಭಂಗಿತನಾಗಿ ಹುಲಿಯ ಮೇಲಿಂದ ಕೆಳಗಿಳಿದು ಕಾಲನಡಿಗೆ ಯಿಂದ ಗುರುಗಳ ಬಳಿಗೆ ಚರಣಕ್ಕೆರಗಿ ತನ್ನ ಉದ್ಧಟತನಕ್ಕಾಗಿ ಕ್ಷಮಿಸ-ಬೇಕೆಂದು ಬಹಳವಾಗಿ ಬೇಡಿಕೊಂಡನು. ಆಗ ಗುರುಗಳು ಯೋಗಾಭ್ಯಾಸ ಮಾಡುವದೂ ಯೋಗಸಾಮರ್ಥ್ಯವನ್ನು ಸಂಪಾದಿಸುವದು ಅಹಂಕಾರಕ್ಕಾಗಿ ಅಲ್ಲ; ಆ ಸಾಮರ್ಥ್ಯದ ಬಲದಿಂದ ಲೋಕಕಲ್ಯಾಣವನ್ನು ಮಾಡಿ ಪರಮಾತ್ಮನ ಪ್ರೀತಿಗೆ ಪಾತ್ರರಾಗಬೇಕು ಎಂದು ಉಪದೇಶಮಾಡಿ ಆಶೀರ್ವದಿಸಿ ಕಳಿಸಿಕೊಟ್ಟರು. ಇಂಥ ಅನೇಕ ಆಶ್ಚರ್ಯಕರ ಮಹಿಮೆಗಳನ್ನು ಕಂಡ ಬಹು ಜನರು ಶ್ರೀ ಬಿಷ್ಟೇಶರಲ್ಲಿ ಭಯ, ಭಕ್ತಿಗಳಿಂದ ನಡೆದುಕೊಳ್ಳಹತ್ತಿದರು. ಹೀಗೆ ಪುನಃ ತಮ್ಮ ಹತ್ತರ ಜನಸಂದಣಿ ಹೆಚ್ಚಾಗಹತ್ತಲು ತಮ್ಮ ಅನುಷ್ಠಾನಕ್ಕೆ ತೊಂದರೆಯಾಗಬಾರದೆಂದು ಪಾವನಳಾದ ತುಂಗಭದ್ರೆಯ ಮಧ್ಯದಲ್ಲಿ ಇರುವ ಒಂದು ನೀರಲಮರದ ಬುಡದಲ್ಲಿ ಶಿವತೀರ್ಥದ ಹತ್ತರ **"ಜಂಬುಕೇಶ್ವರ"** ಎಂಬ ಹೆಸರಿನ ಶಿವಲಿಂಗವನ್ನು ಸ್ಥಾಪಿಸಿ, ಅಲ್ಲಿಯೇ ಇದ್ದು ಅನುಷ್ಠಾನ ಮಾಡಹತ್ತಿದರು. ಅಲ್ಲಿ ಇರುತ್ತಿರುವಾಗಲೇ ತುಂಗಭದ್ರೆ ಯಲ್ಲಿ ಇರುವ ಅಷ್ಟತೀರ್ಥಗಳನ್ನುಕಂಡು ಅವುಗಳನ್ನು ಜೀರ್ಣೋದ್ಧಾರ ಗೊಳಿಸಿದರು.

ಒಮ್ಮೆ ಶ್ರೀ ಬಿಷ್ಟಪ್ಪಯ್ಯನವರ ಪತ್ನಿಯವರಾದ ಸಾಧ್ವಿಶಿರೋಮಣಿ ಲಕ್ಷ್ಮೀಬಾಯಿ(?)ಯವರು ಪತಿ ಸನ್ನಿಧಿಗೆ ಬಂದು ಓರ್ವ ಭಕ್ತನ ಮನೆಯಲ್ಲಿ

ವಿವಾಹಸಮಾರಂಭಕ್ಕೆ ಬರಲು ಆಮಂತ್ರಣವಿದ್ದ ಮೂಲಕ ತಾವು ಅಲ್ಲಿಗೆ ಹೋಗಲು ಅನುಜ್ಞೆ ಬೇಡಲು 'ಹೋಗು' ಎಂದು ಅಪ್ಪಣೆಕೊಟ್ಟರು. ಆದರೆ ವಿವಾಹಸಮಾರಂಭಕ್ಕೆ ಹೋಗಲು ತಕ್ಕವುಗಳಾದ ವಸ್ತ್ರಾಭರಣಗಳು ತಮ್ಮಲ್ಲಿ ಇಲ್ಲದಿರುವದನ್ನು ತಿಳಿದು ಕೂಡಲೇ ಆದಿಶಕ್ತಿಯೇ ಪಾವನತರ ಜಲರೂಪ ಧಾರಿಯಾಗಿ ಹರಿಯುತ್ತಿರುವ ತುಂಗಭದ್ರೆಯನ್ನು ಪ್ರಾರ್ಥಿಸಲು ಕೂಡಲೆ ಜಲಮಧ್ಯದಲ್ಲಿ ಒಂದು ಪೆಟ್ಟಿಗೆಯು ಮೇಲಕ್ಕೆ ಬಂದು ದಂಡೆಯು ಕಡೆಗೆ ಬರಹತ್ತಿತು. ಅದನ್ನು ತೆರೆದು ನೋಡಲು ಅಮೌಲ್ಯವಾದ ವಸ್ತ್ರ ಆಭರಣಗಳು ತುಂಬಿಕೊಂಡಿದ್ದವು ಅವುಗಳನ್ನು ಧರಿಸಿಕೊಂಡು ಲಕ್ಷ್ಮಮ್ಮಂಬೆ ಯುವರು ವಿವಾಹಸಮಾರಂಭಕ್ಕೆ ಹೋದರು. ಸಮಾರಂಭಕ್ಕಾಗಿ ಕೂಡಿದ ದೂರದೂರದ ಜನರು ಲಕ್ಷ್ಮಮ್ಮಂಬೆಯುವರು ಧರಿಸಿದ ವಸ್ತ್ರಾಭರಣಗಳ ಕಾಂತಿಯನ್ನು ನೋಡಿ ಬೆರಗುಗೊಂಡು ಶ್ರೀ ಬಿಷ್ಟೇಶ ಯೋಗಿವರ್ಯರ ಮಹಿಮೆಯನ್ನು ಅರಿತು ಅವರು ಸಾಮಾನ್ಯ ಮಾನವರಲ್ಲ; ಮಹಾಪುರುಷರು ಎಂದು ಕೊಂಡಾಡಿದರು. ಹೀಗೆಯೇ ಅನೇಕ ತರಹದ ಪವಾಡಗಳನ್ನು ತೋರಿಸುತ್ತ ರಂಗಾಪುರದಲ್ಲಿ ವಾಸವಾಗಿದ್ದರು.

———

## ಪ್ರಕರಣ ೧೦

# ಗೋಪುರದ ಕಾರ್ಯಾರಂಭ

ರಂಗಾಪುರದಲ್ಲಿ ಶ್ರೀ ಬಿಷ್ಟೇಶರು ಭಕ್ತಜನರ ಇಷ್ಟಾರ್ಥಗಳನ್ನು ಪೂರೈಸುತ್ತ ನಿತ್ಯಾನುಷ್ಠಾನಗಳಲ್ಲಿ ನಿರತರಾಗಿ ಕೆಲವು ಕಾಲ ಸೌಖ್ಯವಾಗಿ ಇರುತ್ತಿರಲು, ಒಂದು ದಿವಸ ಪಂಪಾಧೀಶನಾದ ಶ್ರೀ ವಿರೂಪಾಕ್ಷೇಶ್ವರನು ತನ್ನ ಪ್ರತಿರೂಪನಾದ ಬಿಷ್ಟೇಶನ ಸ್ಥಿತಿ ರೀತಿಗಳನ್ನು ತಿಳಿದುಕೊಳ್ಳುವದಕ್ಕಾಗಿ ಸ್ವತಃ ಯತಿರೂಪಧಾರಿಯಾಗಿ ರಂಗಾಪುರಕ್ಕೆ ಬಂದನು. ಆಕಸ್ಮಿಕವಾಗಿ ತನ್ನ ಆಶ್ರಮಕ್ಕೆ ಬಂದ ಯತಿಯನ್ನು ಕಂಡು ಬಿಷ್ಟೇಶರು ಮೊದಲು ಬೆರಗು-ಗೊಂಡರು. ಆದರೆ ಪ್ರಜ್ವಲಿತವಾದ ಅಗ್ನಿಯಂತೆ ತೇಜೋಮಯವಾದ ಆ ಯತಿಯ ರೂಪವನ್ನು ಕಂಡು ನಿಜರೂಪವನ್ನು ತಿಳಿದು ಕೂಡಲೇ ಎದ್ದು ಸಾಷ್ಟಾಂಗ ನಮಸ್ಕಾರ ಮಾಡಿದರು. ಯತಿಯು ಬಿಷ್ಟೇಶರನ್ನು ಎಬ್ಬಿಸಿ ಆಲಿಂಗಿಸಿದನು. ಮತ್ತು ಈಗಲೇ ತನ್ನ ಸ್ವಸ್ಥಾನವಾದ ಪಂಪಾಕ್ಷೇತ್ರಕ್ಕೆ ಹೊರಡಲು ಅಪ್ಪಣೆ ನೀಡಿ ತಾನು ಆ ಯತಿರೂಪದಲ್ಲಿಯೇ ಬಿಷ್ಟೇಶರ ಆಶ್ರಮ ಬಿಟ್ಟು ಹೊರಹೊರಟನು. ಬಿಷ್ಟೇಶರಾದರೂ ಪರಮಾತ್ಮನ ಅನುಜ್ಞೆಯಂತೆ ಆತನನ್ನು ಹಿಂಬಾಲಿಸಿದರು. ಇಬ್ಬರೂ ವಾಯುವೇಗದಿಂದ ನಡೆದು ಕ್ಷಣ ಕಾಲದಲ್ಲಿಯೇ ಪಂಪಾಕ್ಷೇತ್ರವನ್ನು ತಲ್ಪಿದರು ಮತ್ತು ದೇವಾಲಯದಲ್ಲಿ ಪ್ರವೇಶಮಾಡಿ, ಅಲ್ಲಿ ಕೂಡಿದ್ದ ಭಕ್ತಜನರೆಲ್ಲರೂ ನೋಡುತ್ತಿರುವಂತೆಯೇ ಇಬ್ಬರೂ ಗರ್ಭಗುಡಿಯನ್ನು ಪ್ರವೇಶಿಸಿದರು. ಕೂಡಲೇ ಗರ್ಭಗುಡಿಯ ದ್ವಾರವು ತನ್ನಿಂದ ತಾನೇ ಮುಚ್ಚಲ್ಪಟ್ಟಿತು. ಹೊರಗಿದ್ದ ಭಕ್ತಜನರೆಲ್ಲರೂ ಈ ಚಮತ್ಕಾರವನ್ನು ನೋಡಿ, ದಿಙ್ಮೂಢರಾದರು ಅವರಿಗೆ ಒಳಗಿನ ಚಮತ್ಕಾರವು ತಿಳಿಯದಾಯಿತು. ದ್ವಾರವು ಮುಚ್ಚಲ್ಪಟ್ಟ ಮೇಲೆ

ಶ್ರೀ ಪಂಪಾವಿರುಪಾಕ್ಷೇಶನು ಬಿಷ್ಟೇಶರಿಗೆ "ಮಗು ನಿನ್ನ ಕೀರ್ತಿಯು ಜಗತ್ತಿನಲ್ಲಿ ಸ್ಥಿರವಾಗಿ ಉಳಿಯುವಂತಾಗಲೆಂದು ನನ್ನ ಇಚ್ಛೆ ಇರುತ್ತದೆ. ಆದುದರಿಂದ ನೀನು ನನ್ನ ಈ ಮಂದಿರದ ಪೂರ್ವಭಾಗದ ಮಹಾದ್ವಾರದ ಮೇಲೆ ಸುಂದರವಾದ ಗೋಪುರವನ್ನು ಕಟ್ಟಿಸು" ಎಂದು ಆಜ್ಞೆಮಾಡಿದನು. ಹೀಗೆ ದೇವಾಧಿದೇವನ ಅಜ್ಞೆಯನ್ನು ಕೇಳಿ, ಬಿಷ್ಟಪ್ಪಯ್ಯನವರು ಚಿಂತೆಗೊಳಗಾದರು, ತನ್ನಿಂದ ಈ ಮಹಾಕಾರ್ಯವು ಹೇಗೆ ಸಾಧ್ಯವು ಎಂದು ಆಲೋಚಿಸಿ. "ಜಗತ್ಪ್ರಭೋ ನನ್ನಿಂದ ಈ ಮಹತ್ಕಾರ್ಯವು ಹೇಗೆ ಸಾಧ್ಯವಾದೀತು, ನಾನು ನಿಷ್ಕಾಂಚನನು. ಜನಬಲವಾದರೂ ನನಗೆ ಲಭಿಸುವದು ಹೇಗೆ? ಈ ಕಲಿಕಾಲದಲ್ಲಿ ಇಂಥ ಮಹಾಕಾರ್ಯವು ಅಸಾಧ್ಯವಲ್ಲವೇ ಎಂದು ಕೇಳಲು ಪರಮಾತ್ಮನು ಮುಗುಳುನಗೆ ನಕ್ಕು ವತ್ಸಾ! ನಿನ್ನನ್ನೇ ನೀನು ಮರೆತು ಬಿಟ್ಟಿರುವೆ. ನನ್ನ ಅಂಶವೇ ಆಗಿ ಮಾನವರೂಪ ಧರಿಸಿದ ನಿನಗೆ ಯಾವದು ಅಸಾಧ್ಯವಿದೆ? ನಿಶ್ಚಿಂತನಾಗು. ವಿಶ್ವಕರ್ಮನನ್ನು ಕರೆದು ಆಜ್ಞಾಪಿಸಿ ಅವನ ಸಹಾಯದಿಂದ ಕಾರ್ಯೋದ್ಯುಕ್ತನಾಗು. ದ್ರವ್ಯಕ್ಕಾಗಿ ಕುಬೇರನನ್ನು ಪ್ರೋತ್ಸಾಹಿಸು, ಧನಬಲದಿಂದ ಜನಬಲವು ತಾನೇ ಲಭಿಸುವದು ಎಂದು ಹೇಳಿ, ಪರಮಾತ್ಮನು ಅಂತರ್ಧಾನನಾದನು. ಬಳಿಕ ಶ್ರೀ ಬಿಷ್ಟೇಶರು ಮನಃಶುದ್ಧಿಗಾಗಿ ಅಲ್ಲಿಯೇ ಧ್ಯಾನಾಸಕ್ತರಾಗಿ ಕುಳಿತುಕೊಂಡರು. ಎಂಟು ದಿವಸಗಳ ನಂತರ ಗರ್ಭಗುಡಿಯ ಬಾಗಿಲುಗಳು ತಮ್ಮಿಂದ ತಾವೇ ತೆರೆಯಲ್ಪಟ್ಟವು ಧ್ಯಾನಾಸಕ್ತರಾದ ಬಿಷ್ಟೇಶರು ಕಣ್ಣು ತೆರೆದರು. ಭಕ್ತಜನರು ನೋಡುತ್ತಿರುವಂತೆಯೇ ಮೊದಲಿಗಿಂತಲೂ ಶತಪಟ್ಟು ತೇಜಸ್ವಿಗಳಾಗಿ ಗರ್ಭಗುಡಿಯಿಂದ ಹೊರಗೆ ಬಂದರು. ಕೂಡಲೇ ಪೂರ್ವದ ಮಹಾದ್ವಾರವನ್ನು ಕಂಡು ಅದರ ಮುಂಭಾಗದಲ್ಲಿ ನಿಂತು ಗೋಪುರದ ಸ್ಥಾನವನ್ನು ಈಕ್ಷಿಸಿದರು. (ಇಲ್ಲಿ ದಿವಾ ಒಂದು ಪ್ರಹರದ ಸೂರ್ಯಕಿರಣಕ್ಕೆ ತಾಗುವಂತಾಗುವಂತೆ ಗೋಪುರದ ಎತ್ತರವನ್ನು ಗೊತ್ತುಪಡಿಸಿದರೆಂದು ಬಹು ಜನರಿಂದ ಹೇಳಲಾಗುತ್ತದೆ.) ನಂತರ ವಿಶ್ವಕರ್ಮನನ್ನು ಸ್ಮರಿಸಲು ಆತನು ಮನುಷ್ಯದೇಹಧಾರಿಯಾಗಿ ಬಂದು ನಿಂತು ಭಗವಾನ್ ಏನಾಜ್ಞೆ" ಎಂದು ಕೇಳಿದನು. ಬಿಷ್ಟಪ್ಪಯ್ಯನವರು ಅವನನ್ನು ಆಶೀರ್ವದಿಸಿ "ಮಗು, ಶ್ರೀ ಸ್ವಾಮಿಯ ಮಹಾದ್ವಾರಕ್ಕೆ ಒಂದು ಸುಂದರವಾದ ಗೋಪುರವನ್ನು ರಚಿಸ-

ಬೇಕು" ಎಂದು ಹೇಳಲಾಗಿ ಸ್ವಾಮಿ ಸತತವಾದ ತಮ್ಮ ಕೃಪಾಬಲದಿಂದ ನನ್ನ ಶಕ್ತ್ಯನುಸಾರವಾಗಿ ಕಾರ್ಯಮಾಡುವೆನೆಂದು ಹೇಳಿ ತನ್ನ ಕಿಂಕರರನ್ನು ಕರೆಯಿಸಿ, ಅವರೊಂದಿಗೆ ಉತ್ತಮವಾದ ಸ್ಥಳವನ್ನು ನೋಡಿ ಅಲ್ಲಿ ನೀರು ಹತ್ತುವ ವರೆಗೆ ನೆಲವನ್ನು ಕಡಿಸಿದನು. ಆಗ ಅಲ್ಲಿ ಹೇಮಮಯವಾದ ಪಾತ್ರೆಯೊಂದು ಹತ್ತಿತು ಅದನ್ನು ಶ್ರೀ ಬಿಷ್ಟೇಶರ ಆಜ್ಞೆಯಂತೆ ಮೇಲಕ್ಕೆತ್ತಲು ಅದರ ಕೆಳಗೆ ಅತಿ ಪೂರ್ವಕಾಲದಿಂದ ಧ್ಯಾನಾಸಕ್ತರಾಗಿ ಕುಳಿತ ಇಬ್ಬರು ತಪಸ್ವಿಗಳು ಇದ್ದದ್ದು ಕಂಡಿತು. ಶ್ರೀ ಬಿಷ್ಟೇಶರನ್ನು ಕಂಡು ಆಶ್ಚರ್ಯಚಕಿತರಾಗಿ ನೋಡುತ್ತ ವಿಚಾರಮಗ್ನರಾಗಿರಲು ಆ ತಪಸ್ವಿಗಳು ಸ್ವಲ್ಪ ಹೊತ್ತಿನಲ್ಲಿ ಧ್ಯಾನ ವಿಮುಕ್ತರಾಗಿ ಸಂಮುಖವಲ್ಲಿ ನಿಂತಿದ್ದ ಶ್ರೀ ಬಿಷ್ಟೇಶರನ್ನು ಕಂಡು, "ಮಗು, ಶ್ರೀ ರಾಮನು ಸೀತಾದೇವಿಯನ್ನು ಹುಡುಕಿಕೊಂಡು ಬರಲು ಹೋದವನು ಪುನಃ ತಿರುಗಿ ಬಂದು ಹೆಂಡತಿಯೊಡನೆ ಸುಖವಾಗಿ ಇರುವನೇ" ಎಂದು ಕೇಳಲು ಬಿಷ್ಟೇಶರು ಮಂದಸ್ಮಿತರಾಗಿ "ತಾಪಸವರ್ಯರೇ ಆ ಕಾಲವು ಬಹಳೇ ಹಿಂದಿನದಾಗಿದೆ. ಶ್ರೀ ರಾಮನು ಸೀತಾಪಹರಣಮಾಡಿದ ರಾವಣನನ್ನು ಸಂಹರಿಸಿ ಸೀತಾದೇವಿಯನ್ನು ಕರೆತಂದು ಬಹುಕಾಲದ ವರೆಗೆ ರಾಜ್ಯಭಾರ ನಡೆಸಿದನು. ಆಗ ತ್ರೇತಾಯುಗದ ಕಾಲವಾಗಿತ್ತು. ಅದಾದ ನಂತರ ದ್ವಾಪರಯುಗವೂ ಹೋಗಿ ಈಗ ಕಲಿಯುಗವು ನಡೆಯುತ್ತಿದೆ" ಎಂದು ಹೇಳಲು ಆ ತಪಸ್ವಿಗಳು ವಿಸ್ಮಿತರಾಗಿ ಮುಗುಳು ನಗೆಯಿಂದ "ನೀನೇ ನಮ್ಮ ಪಾಲಿನ ಭಗವಾನ್ ಕಲಿವೇಷನಿರುವೆ. ಇರಲಿ. ದೇವದೇವನ ಆಜ್ಞೆಯನು ಪಾಲಿಸು. ನಮ್ಮಿಬ್ಬರನ್ನು ಪುನಃ ಭೂಮಿಯಲ್ಲಿ (ಇಲ್ಲಿಯೇ) ಮುಚ್ಚಿಬಿಡು" ಎಂದು ಹೇಳಲು ಬಿಷ್ಟೇಶರು ಅವರ ಇಚ್ಛೆಯ ಪ್ರಕಾರ ಅವರನ್ನು ಅಲ್ಲಿಯೇ ಇರಿಸಿ ಮೇಲೆ ಮೊದಲಿದ್ದಂತೆ ಹೇಮಪಾತ್ರವನ್ನು ಅಚ್ಛಾದಿಸಿ, ಸುತ್ತಲೂ ಮೇಲೆಯೂ ಕಲ್ಲುಗಳಿಂದ ಕಟ್ಟಿಸಿ, ಒಂದು ದ್ವಾರವನ್ನು ಬಿಡಿಸಿದನು. ಮತ್ತು ಅಲ್ಲಿಯೇ "ಪ್ರಸನ್ನ ವಿರುಪಾಕ್ಷ" ವೆಂಬ ಹೆಸರಿನಿಂದ ಶಿವಲಿಂಗವನ್ನು ಸ್ಥಾಪಿಸಿ ಶಿಲ್ಪಿಗಳನ್ನು ಕರೆದು "ನೀವು ಇನ್ನು ಗೋಪುರ ಕಟ್ಟುವ ಕಾರ್ಯ ಪ್ರಾರಂಭ ಮಾಡಿರಿ" ಎಂದು ಹೇಳಿ ಅವರಿಗೆ ಭಸ್ಮವನ್ನು ಕೊಟ್ಟರು. ಹೀಗೆ ಶ್ರೀ ಬಿಷ್ಟೇಶರ ಆಜ್ಞೆಯಂತೆ ಶಿಲ್ಪಿಗಳೂ ಕಾರ್ಮಿಕರೂ ಕಾರ್ಯವನ್ನು ಮಾಡ ಹತ್ತಿದರು. ಅವರು ಮಾಡಿದ ಕೆಲಸಕ್ಕನುಸಾರವಾಗಿ ವೇತನವನ್ನುಕೊಡುವಾಗ

ಶ್ರೀ ಬಿಷ್ಟಪ್ಪಯ್ಯನವರು ಎಲ್ಲರಿಗೂ ಆರ್ಲಿನ ಉಂಡೆಗಳನ್ನು ಮಾಡಿ ಕೊಂಡು ಬರಲಿಕ್ಕೆ ಹೇಳಿ ಅವರು ತಂದ ಉಂಡೆಗಳನ್ನು ತಮ್ಮ ಯೋಗದೃಷ್ಟಿ ಯಿಂದ ನೋಡಲು ಆ ಉಂಡೆಗಳಲ್ಲಿ ಅವರವರು ಮಾಡಿದ ಕೆಲಸಕ್ಕೆ ತಕ್ಕಷ್ಟು ಹಣವು ಸಿಗುತ್ತಿತ್ತು. ಹೀಗೆ ಉದ್ಯೋಗಕ್ಕೆ ತಕ್ಕಂತೆ ವೇತನವು ಸಿಗಹತ್ತಿದ್ದ ರಿಂದ ಎಲ್ಲರೂ ಉತ್ಸಾಹದಿಂದ ಕಾರ್ಯವನ್ನು ಮಾಡಹತ್ತಿದರು. ಈ ರೀತಿಯಾಗಿ ಗೋಪುರದ ಕಟ್ಟಡದ ಕಾರ್ಯವನ್ನು ಪ್ರಾರಂಭಮಾಡಿಸಿ ತಾವು ಪುನಃ ರಂಗಾಪುರಕ್ಕೆ ಬಂದು ಧ್ಯಾನಾನುಷ್ಠಾನಗಳಲ್ಲಿ ನಿರತರಾದರು.

— — — —

## ಪ್ರಕರಣ ೧೧

# ಬಲಿದಾನ ಅಥವಾ ಗೋಪುರದಮ್ಮ

ಪಂಪಾಪತಿಯ ಆಜ್ಞಾನುಸಾರವಾಗಿ ಪೂರ್ವದ ಮಹಾದ್ವಾರದ ಮೇಲೆ ಗೋಪುರ ಕಟ್ಟುವ ಕಾರ್ಯವು ಶ್ರೀ ಬಿಷ್ಟೇಶರ ಪ್ರೋತ್ಸಾಹನೆಯಿಂದ ಪ್ರಾರಂಭವಾಯಿತು. ನಿತ್ಯವೂ ಕಾರ್ಯವು ಸುಗಮವಾಗಿ ಸಾಗುವಂತೆ ವ್ಯವಸ್ಥೆ ಮಾಡಿ ಶ್ರೀ ಬಿಷ್ಟೇಶರು ರಂಗಾಪುರದಲ್ಲಿ ಬಂದು ಇರಹತ್ತಿದರಷ್ಟೇ? ಆ ಪ್ರಕಾರ ಕಟ್ಟಡ ಕಾರ್ಯವು ಸುಗಮವಾಗಿ ನಡೆದು ಸ್ವಲ್ಪೇ ಅವಧಿಯಲ್ಲಿ ಗೋಪುರದ ಮೊದಲನೇ ಅಂತಸ್ತು ಪೂರ್ತಿ ಆಗಿ ಎರಡನೇ ಅಂತಸ್ತು ಕಟ್ಟಲು ಶಿಲ್ಪಿಗಳೂ ಕಾರ್ಮಿಕರೂ ಪ್ರಾರಂಭ ಮಾಡಿದರು. ಆದರೆ ದೇವತಾಕಾರ್ಯವೇ ಆಗಲಿ, ಜನತಾಕಾರ್ಯವೇ ಆಗಲಿ, ಎಂಥ ಸತ್ಕಾರ್ಯವೇ ಆಗಲಿ ಆ ಕಾರ್ಯಕ್ಕೆ ವಿಘ್ನವನ್ನುಂಟುಮಾಡುವದೇ ದೇವತೆಗಳ ಕಾರ್ಯವೆಂದು ತೋರುತ್ತದೆ. ಅಥವಾ ಕಾರ್ಯಕರ್ತರ ನಿರ್ಧಾರ, ನಿಷ್ಠೆ, ಕರ್ತವ್ಯದಕ್ಷತೆ, ಮತ್ತು ತ್ಯಾಗಗಳ ಪರೀಕ್ಷೆಮಾಡುವ ಉದ್ದೇಶವೆಂದು ತೋರುತ್ತದೆ. ಆ ಪ್ರಕಾರ ಶ್ರೀ ಬಿಷ್ಟೇಶರು ಪ್ರಾರಂಭಿಸಿದ ಗೋಪುರದ ಕಾರ್ಯಕ್ಕೆ ವಿಘ್ನ ಬಾರದೇ ಇರಲಿಲ್ಲ. ಗೋಪುರದ ಎರಡನೇ ಅಂತಸ್ತು ಕಟ್ಟಹತ್ತಿದ ಮೇಲೆ ಹಗಲು ಕಟ್ಟಿದ ಭಾಗವು ರಾತ್ರಿಯಲ್ಲಿ ಕಳಚಿ ಬೀಳುತ್ತಿತ್ತು. ನಿತ್ಯವೂ ಈ ಕ್ರಮವೇ ನಡೆಯಹತ್ತಿತು. ಶಿಲ್ಪಿಗಳಿಗೆ ಇದರ ಕಾರಣವು ತಿಳಿಯದಾಯಿತು. ನಿತ್ಯವೂ ಅವರ ಶ್ರಮವು ವ್ಯರ್ಥವಾಗಹತ್ತಿತು.

ರಂಗಾಪುರದಲ್ಲಿ ಇದ್ದ ಬಿಷ್ಟೇಶರು ಈ ಸಂಗತಿಯನ್ನು ತಿಳಿದು ಚಿಂತೆಗೆ ಒಳಗಾದರು. ಮತ್ತು ಹೀಗಾಗುವಲ್ಲಿ ದೈವೇಚ್ಛೆಯೇನಾದರೂ ಇರಲೇ ಬೇಕೆಂದು ಮನವರಿಕೆ ಮಾಡಿಕೊಂಡು ಶ್ರೀ ಪಂಪಾಪತಿಯನ್ನೇ ಸಾಕ್ಷಾತ್ಕರಿಸಿ ಕೊಂಡು ಈ ವಿಷಯಕ್ಕೆ ಆತನನ್ನೇ ಕೇಳಿ ತಿಳಿದುಕೊಳ್ಳಬೇಕೆಂದು ನಿರ್ಧರಿಸಿ ಪಂಪಾಕ್ಷೇತ್ರಕ್ಕೆ ಬಂದು ಶ್ರೀ ವಿರುಪಾಕ್ಷೇಶ್ವರ ದೇವಾಲಯವನ್ನು ಪ್ರವೇಶ ಮಾಡಿದರು. ಅಲ್ಲಿ ಶ್ರೀ ವಿರುಪಾಕ್ಷನನ್ನು ಬಹುಪರಿಯಿಂದ ಪ್ರಾರ್ಥಿಸಿದರು.

ಆದರಿಂದ ದೇವಾಧಿದೇವನು ಪ್ರತ್ಯಕ್ಷನಾಗಲು "ಜಗತ್ಪ್ರಭೋ, ಗೋಪುರ ಕಟ್ಟಿಸುವ ಕಾರ್ಯವು ನನ್ನಿಂದ ಸಾಧ್ಯವಾಗಲಾರದೆಂದು ನಾನು ಹೇಳಿ ಕೊಂಡರು ಸಹ ನನಗೆ ಪ್ರೋತ್ಸಾಹನೆ ಕೊಟ್ಟು ಕಾರ್ಯಕ್ಕೆ ಆರಂಭಮಾಡಲು ಅನುಜ್ಞೆ ನೀಡಿದೆ. ನಿನ್ನ ದಯೆಯಿಂದ ಗೋಪುರದ ಮೊದಲನೇ ಅಂತಸ್ತು ಪೂರ್ತಿಗೊಂಡಿದೆ. ಆದರೆ ಎಷ್ಟು ಶ್ರಮಬಟ್ಟರೂ ಎರಡನೇ ನೆಲೆಯು ಸ್ಥಿರವಾಗಿ ನಿಲ್ಲಲೊಲ್ಲದು; ಇದಕ್ಕೆ ಏನು ಕಾರಣವೋ ನನಗೆ ತಿಳಿಯದಾಗಿದೆ. ಇದರಲ್ಲಿ ನನ್ನಿಂದ ಏನಾದರೂ ತಪ್ಪಾಗಿದೆಯೋ ? ಅಥವಾ ನನ್ನ ಬಗ್ಗೆ ನಿನ್ನ ಮನಸ್ಸಿನಲ್ಲಿ ಏನಾದರೂ ವಿಕಲ್ಪವುಂಟಾಗಿದೆಯೋ ? ತಿಳಿಸು. ಈಗ ನಾನು ಏನು ಮಾಡಬೇಕೆಂಬುದನ್ನು ಸ್ಪಷ್ಟವಾಗಿ ಆಜ್ಞಾಪಿಸು ಎಂದು ಬಹುಪರಿಯಿಂದ ಪ್ರಾರ್ಥಿಸಲು ಶ್ರೀ ವಿರೂಪಾಕ್ಷನು ಮುಗುಳು ನಗೆಯಿಂದ ಮಗುವೇ ! ನೀನು ಕಾರ್ಯಾರಂಭದಲ್ಲಿ ಗಣನಾಥನನ್ನು ಪೂಜಿಸಿದೆ. ಆದರೆ ದುರ್ಗೆಯನ್ನು ಪೂಜಿಸಲಿಲ್ಲ. ಆದ್ದರಿಂದ ಅವಳು ಕೋಪಗೊಂಡು ಗೋಪುರವನ್ನು ಭಂಗ ಮಾಡುತ್ತಿರುವಳು ನನ್ನ ಅರ್ಧಾಂಗದಲ್ಲಿ ಅವಳು ವಾಸಿಸುತ್ತಿರುವದರಿಂದ ನನ್ನ ಭಕ್ತನಾದ ನೀನು ನಿನ್ನ ಅರ್ಧಾಂಗವನ್ನು ಬಯಸುತ್ತಿರುವಳು" ಎಂದು ಪರಮಾತ್ಮನು ಆಡಿದ ಮಾತುಗಳನ್ನು ಕೇಳಿ, ಬಿಷ್ಟೇಶರು ಆತನಿಗೆ ನಮಸ್ಕಾರ ಮಾಡಿ, "ದೇವಾ, ಹಾಗೇ ಮಾಡುವೆನು" ಎಂದು ಹೇಳಿ ಗರ್ಭಗುಡಿಯಿಂದ ಹೊರಗೆ ಬಂದು ವಿಚಾರಮಾಡಿ "ದೇವಿಯು ನನ್ನ ಹೆಂಡತಿಯನ್ನು ಬಲಿಬೇಡು ತ್ತಿರುವಳು. ದೇವಿಯ ಇಚ್ಛೆಯಂತೆ ಆಗಲಿ" ಎಂದು ಮನಸ್ಸಿನಲ್ಲಿ ನಿರ್ಧರಿಸಿ, ಆ ಯೋಗಿರಾಜರು ರಂಗಾಪುರದಲ್ಲಿ ಇರುವ ತಮ್ಮ ಪತ್ನಿ ಪತಿವ್ರತಾಶಿರೋ ಮಣಿ ಲಕ್ಷ್ಮಮ್ಮಂಬೆಯರಿಗೆ ಮಂಗಲದ್ರವ್ಯಗಳನ್ನೂ ವಸ್ತ್ರಾಲಂಕಾರಗಳನ್ನೂ ಕೊಟ್ಟು ಕಳುಹಿದರು. ಅವುಗಳನ್ನೆಲ್ಲ ನೋಡಿದ ಕೂಡಲೇ ಆ ಸಾಧ್ವಿಯು ಪತಿಯ ಮನೋಗತವನ್ನು ಅರಿತವಳಾಗಿ ಎಲ್ಲ ಸುವಾಸಿನಿಯರನ್ನು ಕರೆಯಿಸಿ, ಭಕ್ಷಭೋಜ್ಯಾದಿಗಳಿಂದ ಅವರನ್ನು ಸಂತುಷ್ಟಪಡಿಸಿದಳು. ಮತ್ತು ಫಲ, ಮಾಂಗಲ್ಯ ವಸ್ತ್ರಾಭರಣಗಳಿಂದ ತುಂಬಿದ ಎರಡು ಮೊರಗಳ ಬಾಗಿನಗಳನ್ನೂ ಪಾಯಸಗಳನ್ನೂ ಮುತ್ತೈದೆಯರಿಗೆ ಕೊಟ್ಟು ಶಿವನಾಮಸ್ಮರಣೆ ಮಾಡುತ್ತ ಸ್ಥೂಲದೇಹವನ್ನು ಅಲ್ಲಿಯೇ ತ್ಯಜಿಸಿದವಳಾಗಿ, ಸೂಕ್ಷ್ಮದೇಹದಿಂದ ಪಂಪಾ ಕ್ಷೇತ್ರಕ್ಕೆ ಬಂದು, ಪಂಪಾಂಬೆಯನ್ನೂ ವಿರುಪಾಕ್ಷೇಶನನ್ನೂ ಮನಸ್ಸಿನಲ್ಲಿ



ಶ್ರೀ ಲಕ್ಷ್ಮ್ಯಂಬೆ — ಗೋಪುರದಮ್ಮ

ಸ್ಮರಿಸಿ ಪತಿಯ ಚರಣಗಳಿಗೆ ವಂದಿಸಿ ಗೋಪುರದ ಮೇಲೆ ಏರಿ ಕುಳಿತಳು. ದಿವ್ಯಾಭರಣಭೂಷಿತಳಾಗಿ ಲಕ್ಷ್ಮಮ್ಮನವರು ಗೋಪುರವನ್ನು ಏರಿದ್ದನ್ನು ಕಂಡು ಅಲ್ಲಿ ಕೂಡಿದ ಭಕ್ತಜನರು ಭಯ-ಭಕ್ತಿಯಿಂದ ನಮಸ್ಕರಿಸಿದರು. ಮತ್ತು ಆ ಸಾಧ್ವಿಮಣಿಯ ಬಲಿದಾನವನ್ನು ಕಂಡು ಆಶ್ಚರ್ಯಚಕಿತರಾಗಿ ಕೊಂಡಾಡಿದರು. ಅಂದಿನಿಂದ ಗೋಪುರದ ಭೂಭಾಗದಲ್ಲಿ ಗೋಪುರಾಂಬಾ ಎಂಬ ಹೆಸರಿನಿಂದ ಪ್ರತಿಮಾ ರೂಪದಲ್ಲಿ ಇಂದಿಗೂ ಭಕ್ತಜನರಿಂದ ಆ ಸಾಧ್ವಿಯು ಪೂಜಿಸಲ್ಪಡುವಳು.

(ಟಿಪ್ಪಣಿ: ಈ ವಿಷಯದಲ್ಲಿ ಕೆಲವು ಭಿನ್ನಾಭಿಪ್ರಾಯಗಳು ಇರುತ್ತವೆ. ಅಲ್ಲದೆ ಸಂಧಿಗ್ಧ ಮತ್ತು ಸಂಶಯಾಸ್ಪದ ವಿಷಯಗಳೂ ಇರುತ್ತವೆ. ಪತಿಯಿಂದ ಮಂಗಲಕರ ದ್ರವ್ಯಗಳೂ ವಸ್ತ್ರಾಭರಣಗಳೂ ಬಂದ ಕೂಡಲೆ ಪತಿಯ ಇಚ್ಛೆಯನ್ನು ಅರಿತು, ಗೋಪುರಕ್ಕೆ ಬಲಿಹೋಗಲು ಸಿದ್ಧಳಾದದ್ದು ಮತ್ತು ಸುಮಂಗಲೆಯರು ಯಾವದೇ ಕಾರಣದಿಂದಾಗಿ ಆತ್ಮಬಲಿದಾನ ಮಾಡುವಾಗ ಮುತ್ತೈದೆಯರಿಗೆ ಭಕ್ಷ್ಯ, ಭೋಜ್ಯ, ಬಾಗಿನಗಳನ್ನು ಕೊಡುವದಾದರೂ ಶಾಸ್ತ್ರಸಮ್ಮತವಿರುವದರಿಂದಆ ಪ್ರಕಾರ ಲಕ್ಷ್ಮಮ್ಮನವರು ಮಾಡಿದ್ದೂ ನಿಃಸಂಧಿಗ್ಧವೂ ಯೋಗ್ಯವೂ ಇರುತ್ತದೆ. ಇಲ್ಲಿ ಸಂಶಯಕ್ಕೆ ಆಸ್ಪದವಿಲ್ಲ ಆದರೆ ಲಕ್ಷ್ಮಮ್ಮನವರು ಪತಿಇಚ್ಛೆಯನ್ನರಿತವರಾಗಿ ರಂಗಾಪುರದಿಂದ ಪಂಪಾಕ್ಷೇತ್ರಕ್ಕೆ ಹೋದದ್ದರ ವಿಷಯಕ್ಕೆ ಅನೇಕ ರೀತಿಯಲ್ಲಿ ಹೇಳುತ್ತಿದ್ದಾರೆ. ಈ ಚರಿತ್ರೆಗೆ ಆಧಾರವಾಗಿ ಸಿಕ್ಕ ಸಂಸ್ಕೃತ ಹಸ್ತಪ್ರತಿಯಲ್ಲಿ ಮೇಲ್ಕಾಣಿಸಿದಂತೆ ಈ ಬಗೆಗೆ ಬರೆಯಲಾಗಿದೆ. ಆದರೆ ಶ್ರೀ ಲಕ್ಷ್ಮಮ್ಮನವರು ರಂಗಾಪುರದಲ್ಲಿ ತಮ್ಮ ಸ್ಥೂಲದೇಹವನ್ನು ತ್ಯಜಿಸಿ. ಸೂಕ್ಷ್ಮದೇಹ ಧರಿಸಿ ಪಂಪಾಪುರಕ್ಕೆ ಹೋದದ್ದು ಸಮಂಜಸವಾಗಿ ತೋರುವದಿಲ್ಲ. ಮತ್ತು ಮುಂದಿನ ಕಥಾಸಂದರ್ಭಕ್ಕೆ ಹೊಂದಿಕೊಳ್ಳುವದೂ ಇಲ್ಲ; ಇಷ್ಟೇ ಅಲ್ಲ ಅವರು ಸದೇಹವಾಗಿ ಗೋಪುರಕ್ಕೆ ಆಹುತಿ ಆದಂತೆಯೂ ಆಗುವದಿಲ್ಲ. ಆದ್ದರಿಂದ ಈ ವಿಷಯಕ್ಕೆ ಅವರ ವಂಶಜರೂ ಭಕ್ತಜನರೂ ತಮ್ಮ ಹಿರಿಯರಿಂದ ತಿಳಿದುಕೊಳ್ಳುತ್ತ ಬಂದಿರುವ ಸಂಗತಿಯನ್ನು ಆಖ್ಯಾಯಿಕೆಗಳನ್ನೂ ವಿಚಾರ ದಲ್ಲಿ ತಕ್ಕೊಳ್ಳುವದು ಅವಶ್ಯವಾಗಿದೆ. ಅವುಗಳಲ್ಲಿ ಸರಿಕಂಡದ್ದನ್ನು ಭಕ್ತ ಜನರೂ ಓದುಗರೂ ಗ್ರಾಹ್ಯಮಾಡಿಕೊಳ್ಳಬೇಕು. ಈಗ ಬಿಷ್ಟಪ್ಪಯ್ಯನವರ

ವಂಶಜರೂ ಅವರಿಂದ ಒಂಬತ್ತನೇ ತಲೆಮಾರಿನವರೂ ಆಗಿರುವ ಸಣ್ಣ ಮಹಾದೇವಪ್ಪಯ್ಯನವರು, ತಾವು ಹಿರಿಯರಿಂದ ಈ ವಿಷಯಕ್ಕೆ ಕೇಳಿದ್ದನ್ನು ಹೇಳುವದೇನೆಂದರೆ ಪತಿಯ ಆದೇಶ ತಿಳಿದ ಕೂಡಲೆ ಲಕ್ಷ್ಮಾಂಬೆಯರು ರಂಗಾಪುರದಲ್ಲಿ ಚಿತಾಪ್ರವೇಶಮಾಡಿ ಸದೇಹವಾಗಿಯೇ ಪಂಪಾಪುರದಲ್ಲಿ ಪ್ರಕಟರಾಗಿ ಪತಿಗೆ ನಮಸ್ಕರಿಸಿ ಗೋಪುರದ ಮೇಲೇರಿ ಕುಳಿತರೆಂತಲೂ ಗೋಪುರವು ಕಟ್ಟುವದಾದ ಮೇಲೆ ಗೋಪುರದೊಳಗಿಂದ ಜೋಗುಳ ಪದ್ಯ ಹಾಡಿದ್ದು ಕೇಳಬರುತ್ತಿತ್ತೆಂದೂ ಹೇಳುತ್ತಿದ್ದರು (ಆಹುತಿ ಹೋಗುವ ಕಾಲಕ್ಕೆ ಅವರು ಗರ್ಭವತಿ ಇದ್ದರೆಂದು ಹೇಳುತ್ತಿದ್ದರು) ಇನ್ನೂ ಕೆಲ ಭಕ್ತ ಜನರು "ಲಕ್ಷ್ಮಾಂಬೆಯವರು ರಂಗಾಪುರದ ಹತ್ತರ ತುಂಗಭದ್ರೆಯಲ್ಲಿ ಧುಮುಕಿ ಪಂಪಾಕ್ಷೇತ್ರದ ನದಿಯಲ್ಲಿ ಸದೇಹವಾಗಿಯೇ ಪ್ರಕಟರಾದರೆಂದು ತಮ್ಮ ಹಿರಿಯರು ಹೇಳುತ್ತಿದ್ದರು" ಎಂದು ಹೇಳುತ್ತಾರೆ. ಶ್ರೀ ಬಿಷ್ಟೇಶರು ಶ್ರೀ ವಿರುಪಾಕ್ಷೇಶನ ಅಂಶಸಂಭೂತರಿದ್ದಂತೆ ಲಕ್ಷ್ಮಾಂಬೆಯವರಾದರೂ ಗೌರಿಯ ಅಂಶಸಂಭೂತರೆಂದೂ ಗೋಪುರದ ಕಾರ್ಯದಲ್ಲಿ ಜನತೆಗೆ ತಮ್ಮ ಮಹಿಮೆಯನ್ನು ತೋರಿಸುವ ಉದ್ದೇಶದಿಂದಲೇ ನಿತ್ಯ ಗೋಪುರವು ಬೀಳುವಂತೆ ಮಾಡುತ್ತಿದ್ದಳೆಂದೂ ಕೊನೆಗೆ ಲಕ್ಷ್ಮಾಂಬೆಯರ ರೂಪದಲ್ಲಿ ಲೋಕಾಭಿರಾಮವಾಗಿ ಗೌರಿಯೇ ಆಹುತಿ ಆಗಿ ಲಕ್ಷ್ಮಾಂಬೆಯವರ ಕೀರ್ತಿ ಅಜರಾಮರ ಉಳಿಯುವಂತೆ ಮಾಡಿದಳೆಂದೂ ಹೇಳುತ್ತಾರೆ. ಏನೇ ಇರಲಿ, ಹೇಗೆಯೇ ಇರಲಿ ಶ್ರೀ ಲಕ್ಷ್ಮಾಂಬೆಯರು ಗೋಪುರಕ್ಕೆ ಆಹುತಿ ಆದದ್ದು ಸತ್ಯಸಂಗತಿಯಾಗಿರುವಲ್ಲಿ ಸಂದೇಹವಿಲ್ಲ. ಅಲ್ಲದೆ ಇವರ ಬಗೆಗೆ ಗಮನಾರ್ಹವಾದ ವಿಷಯವೆಂದರೆ ಶ್ರೀ ಬಿಷ್ಟೇಶರ ಮತ್ತು ಅವರ ಮಗ ಶಿವಪ್ಪಯ್ಯನವರ ಆರಾಧನೆಗಳು ಅವರ ವಂಶಜರಲ್ಲಿ ಹಿರಿಯ ಮನೆತನದವರು ಇರುತ್ತಿರುವ ವಿಠ್ಠಲಾಪುರದಲ್ಲಿ ಪ್ರತಿವರ್ಷ ಜರಗುತ್ತಿರುವಂತೆ ಶ್ರೀ ಲಕ್ಷ್ಮಾಂಬೆಯವರ ಸ್ಮರಣಾರ್ಥವಾಗಿಯೂ ಅವರಿಂದ ಕೃಪಾಪ್ರಸಾದ ಪಡೆಯುವದಕ್ಕಾಗಿಯೂ ಪ್ರತಿ ತಿಂಗಳ ಪೂರ್ಣಿಮೆಗೆ ಗೋಪುರದಮ್ಮನ ಪ್ರೀತ್ಯರ್ಥವಾಗಿ ನೈವೇದ್ಯ ಮತ್ತು ಸುವಾಸಿನಿಯರಿಗೆ ಊಟೋಪಚಾರಗಳು ನಡೆಯುತ್ತಲಿವೆ. ಮತ್ತು ಪ್ರತಿವರ್ಷ ಮಾರ್ಗಶೀರ್ಷ ಶುದ್ಧ ಪೂರ್ಣಿಮೆಯ ದಿವಸ ಶ್ರೀ ಮಹಾಲಿಂಗೇಶನಿಗೆ ಫಲಪೂಜೆಯನ್ನುಮಾಡಿ ಗೋಪುರಮ್ಮನ ಹೆಸರಿನಿಂದಲೇ

ಫಲಪ್ರಸಾದವನ್ನು ಹಂಚುತ್ತಾರೆ. ಒಟ್ಟಾರೆ, ಪತಿಯ ಆಜ್ಞೆಯಂತಾಗಲೀ ಸ್ವಯಂಪ್ರೇರಣೆಯಿಂದಾಗಲೀ ಬಲಿದಾನ ಮಾಡುವದು ಪರಮಾತ್ಮನ ಇಚ್ಛೆ ಅಥವಾ ಆತನ ಅಂಶಭೂತ ವಿಭೂತಿಯುರ ಮಹಿಮೆಯಿಂದಲ್ಲದೆ ಸಾಮಾನ್ಯ ಜನರಿಗೆ ಸಾಧ್ಯವಲ್ಲ ಎಂದು ನಿಶ್ಚಿತವಾಗಿ ಹೇಳಬಹುದು. ಜನತೆಯಲ್ಲಿ ಧರ್ಮಭಾವನೆ, ದೈವಭಕ್ತಿ, ಸಾಧು ಸತ್ಪುರುಷರಲ್ಲಿ ಆದರ, ಸದಾಚಾರಗಳು ಬೆಳೆಯಲೆಂದೇ ಪ್ರಸಂಗಾನುಸಾರವಾಗಿ, ಇಂಥ ಅಸಾಮಾನ್ಯ ಲೀಲೆಗಳನ್ನು ತೋರಿಸುವದೇ ಭಗವಂತನ ಇಚ್ಛೆಯಾಗಿರುತ್ತದೆ).

ಹೀಗೆ ಶ್ರೀ ಲಕ್ಷ್ಮಮ್ಮಾಂಬೆಯವರು ಗೋಪುರದ ಎರಡನೇ ಭೂಭಾಗದಲ್ಲಿ ಕುಳಿತು ಗೋಪುರವನ್ನು ಏರಿಸಲು ಅಪ್ಪಣೆ ಕೊಟ್ಟಮೇಲೆ ಎರಡನೇ ಅಂತಸ್ತು ಕಟ್ಟಲಿಕ್ಕೆ ಶಿಲ್ಪಿಗಳೂ ಕಾರ್ಮಿಕರೂ ಪ್ರಾರಂಭಮಾಡಿದರು. ಶ್ರೀ ಪಂಪಾಂಬೆಯ ಇಚ್ಛೆಯ ಮೇರೆಗೆ ಶ್ರೀ ಲಕ್ಷ್ಮಮ್ಮಾಂಬೆಯವರ ಆತ್ಮಬಲಿದಾನವನ್ನು ಸ್ವೀಕರಿಸಿದ್ದರಿಂದ ಮುಂದೆ ಕಟ್ಟಡದ ಕಾರ್ಯವು ನಿರ್ವಿಘ್ನವಾಗಿ ಸಾಗಿತು. ಇದರಿಂದ ಶ್ರೀ ಬಿಷ್ಟೇಶರೂ ಸಂತುಷ್ಟರಾಗಿ ಏಕಾದಶರುದ್ರ ಪ್ರೀತ್ಯರ್ಥವಾಗಿ ಗೋಪುರವನ್ನು ಹನ್ನೊಂದು ನೆಲೆಯಾಗಿ ಕಟ್ಟಬೇಕೆಂದು ಶಿಲ್ಪಿಗಳಿಗೆ ಅಪ್ಪಣೆಕೊಟ್ಟು ತಾವು ರಂಗಾಪುರಕ್ಕೆ ಬಂದು ಇರಹತ್ತಿದರು.



## ಪ್ರಕರಣ ೧೨

# ಶಿಷ್ಯೋತ್ತಮ ಲಿಂಗಧಾರಿಯು

ಶ್ರೀ ಬಿಷ್ಟೇಶರು ರಂಗಾಪುರಕ್ಕೆ ಬಂದು ಪುನಃ ಅನುಷ್ಠಾನದಲ್ಲಿ ಮಗ್ನರಾದರು. ಹೀಗೆ ಕೆಲವು ಕಾಲ ಗತಿಸಿದ ಮೇಲೆ ಅವರ ಮಹಿಮೆಯನ್ನು ಅರಿತವನಾದ ಓರ್ವ ಲಿಂಗಧಾರಿಯು (ಲಿಂಗಾಯತನು) ಅವರನ್ನು ಕಾಣುವ ಕುತೂಹಲದಿಂದ ರಂಗಾಪುರಕ್ಕೆ ಬಂದು ಮುನಿಪುಂಗವರ ಸನ್ಮುಖದಲ್ಲಿ ನಿಂತುಕೊಂಡನು. ಧ್ಯಾನಮಗ್ನರಾದ ಯೋಗಿವರ್ಯರು ಧ್ಯಾನವಿಮುಕ್ತರಾಗಿ ಕಣ್ತೆರೆದು ಕೃಪಾದೃಷ್ಟಿಯಿಂದ ಸಮ್ಮುಖದಲ್ಲಿ ನಿಂತಿರುವ ಲಿಂಗಧಾರಿಯನ್ನು ನೋಡಿ, ಇಷ್ಟಾರ್ಥವೇನೆಂದು ಕೇಳಲು, ಆ ಲಿಂಗಧಾರಿಯು "ಸ್ವಾಮಿನ್ ತಮ್ಮ ಸೇವೆ ಮಾಡಿಕೊಂಡು ಇದ್ದು ಕೃತಾರ್ಥನಾಗಬೇಕೆಂದು ಬಂದಿರುವೆನು. ಸದಾವಕಾಲವೂ ತಮ್ಮ ಆಜ್ಞಾಧಾರಕನಾಗಿ ಇರುವಂತೆ ಅಪ್ಪಣೆಯಾಗಬೇಕೆಂದು ಕೇಳಿಕೊಳ್ಳಲು ಮುನಿವರ್ಯರು ಸಂತುಷ್ಟರಾಗಿ, "ಹೇ ಲಿಂಗಧಾರಿಯೇ ನೀನು ಶೂದ್ರನು ನನ್ನ ಬಳಿಯಲ್ಲಿಯೇ ವಾಸವಾಗಿರು" ಎಂದು ಆಜ್ಞಾಪಿಸಿದರು.

ಇಲ್ಲಿ ಯೋಗಿವರ್ಯರು ಲಿಂಗಧಾರಿಗೆ ' ನೀನು ಶೂದ್ರನು" ಎಂದು ಅಂದಿದ್ದಾರೆ. ಈ ಮಾತು ಆಧುನಿಕ ಕಾಲದಲ್ಲಿಯ ಲಿಂಗವಂತರನ್ನು ಕೆರಳಿಸುವಂತಹದಿದೆ. ಆದರೆ ಅದಕ್ಕೆ ಅಷ್ಟೊಂದು ಮಹತ್ವವನ್ನು ಕೊಡುವದು ಉಚಿತವಲ್ಲ. ಚತುರ್ವರ್ಣ್ಯ ಭೇದದಂತೆ ಶೂದ್ರರು ಅಂತ್ಯಜರೆಂದು ಗಣಿಸಲಾಗಿದೆ ಆದರೆ ಇಲ್ಲಿ ಆ ಲಿಂಗಧಾರಿಗೆ ಅಂಥ ಅಂತ್ಯಜನೆಂದು ತಿಳಿದುಕೊಳ್ಳುವದು ಯೋಗ್ಯವಲ್ಲ, ಅಲ್ಲದೆ ಅವನಿಗೆ ತನ್ನ ಹತ್ತರವೇ ಇದ್ದುಕೊಂಡು ಸೇವೆ ಮಾಡು ಎಂದು ಆಜ್ಞಾಪಿಸಿದ್ದರಿಂದ ಆ ಲಿಂಗಧಾರಿಯು ಅಂತ್ಯಜನೆಂದು ಹೇಳಲಿಕ್ಕಾಗುವದಿಲ್ಲ. ಅಲ್ಲದೆ ಇನ್ನೂ ಎರಡು ವಿಧವಾಗಿ ಈ ವಿಷಯದ ಸ್ಪಷ್ಟೀಕರಣ ಮಾಡಬಹುದು. ಮೊದಲನೆಯದಾಗಿ ಇತ್ತೀಚೆಗಿನ ಕಾಲದಲ್ಲಿ ಸನಾತನ ಧರ್ಮದಲ್ಲಿದ್ದ ಚತುರ್ವರ್ಣ್ಯಗಳ ವ್ಯವಸ್ಥೆಯು ಅಳಿಯುತ್ತ

ಬಂದಂತೆಲ್ಲ ಆಚಾರಶೀಲರೂ ಸನಾತನ ಧರ್ಮನಿಷ್ಠರೂ ಆದ ಬ್ರಾಹ್ಮಣರು, ಬ್ರಾಹ್ಮಣರಲ್ಲದ ಇತರೇ ಎಲ್ಲ ಜನಾಂಗಕ್ಕೂ ಶೂದ್ರರೆಂದೇ ಸಂಬೋಧಿಸುವ ರೂಢಿಯು ಸಾಮಾನ್ಯವಾಗಿ ನಡೆದುಬಂದಿತ್ತು. ಈ ರೂಢಿಗನುಸಾರವಾಗಿಯೇ ಶ್ರೀ ಬಿಷ್ಟಪ್ಪಯ್ಯನವರೂ ಆ ಲಿಂಗಧಾರಿಗೆ ಶೂದ್ರನೆಂದು ಸಂಬೋಧಿಸಿರ ಬಹುದು. ಅಥವಾ ಎರಡನೇ ಮಾತೆಂದರೆ ಶ್ರೀ ಬಸವಣ್ಣನವರ ಕಾಲಕ್ಕೆ ಅನೇಕ ಚತುರ್ಥವರ್ಣದವರೂ ಲಿಂಗಧಾರಿಗಳಾಗಿದ್ದರು. ಅಂಥವರಲ್ಲಿಯೇ ಈ ಲಿಂಗಧಾರಿಯೂ ಇರಬಹುದು. ಏನೇ ಇದ್ದರೂ ಆ ಲಿಂಗಧಾರಿಯನ್ನು ಅವರು ತಿರಸ್ಕರಿಸದೇ ತಮ್ಮ ಹತ್ತಿರವೇ ಸೇವೆಗೆ ಇಟ್ಟುಕೊಂಡರು ಅಂದಮೇಲೆ ಆ ಲಿಂಗಧಾರಿಗೆ ಶೂದ್ರನೆಂದು ಸಂಬೋಧಿಸಿದ್ದಕ್ಕೆ ಹೆಚ್ಚಾಗಿ ಮಹತ್ವ ಕೊಡುವ ಕಾರಣವಿಲ್ಲ.

ಹೀಗೆ ಶ್ರೀ ಬಿಷ್ಟೇಶರ ಅಪ್ಪಣೆಯ ಮೇರೆಗೆ ಆ ಲಿಂಗಾಂಗಿಯು ಅವರ ಹತ್ತರ ಸೇವೆ ಮಾಡಿಕೊಂಡು ಇರಹತ್ತಿರಲು ಶ್ರೀ ಬಿಷ್ಟೇಶರು ಅವನ ಸೇವೆಗೆ ಮೆಚ್ಚಿದವರಾಗಿಯೂ ಅವನು ಪ್ರಾಮಾಣಿಕನಿರುವನೆಂಬುದನ್ನು ಮನಗಂಡವ ರಾಗಿಯೂ ಅವನಿಗೆ "ಹೇ! ಶಿಷ್ಯೋತ್ತಮನೇ, ಪಂಪಾಕ್ಷೇತ್ರದಲ್ಲಿ ಶ್ರೀ ವಿರುಪಾಕ್ಷೇಶನ ದೇವಾಲಯದ ಪೂರ್ವ ಮಹಾದ್ವಾರದ ಮೇಲೆ ಗೋಪುರ ಕಟ್ಟುವ ಕಾರ್ಯವು ಶಿಲ್ಪಿಗರಿಂದ ಮಾಡಲ್ಪಡಹತ್ತಿದೆ. ನೀನು ಅಲ್ಲಿಗೆ ಹೋಗಿ ನಿನ್ನ ಸೇವೆಯನ್ನು ಸಲ್ಲಿಸು. ಇಕೋ, ಈ ನನ್ನ ಆಸನದ ಕೆಳಗೆ ಇದ್ದ ದ್ರವ್ಯವನ್ನು ತೆಗೆದುಕೊಂಡು ಅಲ್ಲಿಗೆ ಹೋಗಿ ಕೆಲಸ ಮಾಡುತ್ತಿರುವ ಕಾರ್ಮಿಕರಿಗೂ ಶಿಲ್ಪಿಗಳಿಗೂ ಅವರವರ ಕಾರ್ಯಕ್ಕನುಸಾರವಾಗಿ, ವೇತನ ವನ್ನು ಕೊಡು ಎಂದು ಆಜ್ಞಾಪಿಸಿದ ಕೂಡಲೇ ಲಿಂಗಾಂಗಿಯು ಗುರುಗಳ ಆಸನ ಬುಡದಲ್ಲಿದ್ದ ದ್ರವ್ಯವನ್ನು ತಕ್ಕೊಂಡು ಗುರುಗಳಿಂದ ಅಪ್ಪಣೆ ಪಡೆದು ಪಂಪಾಕ್ಷೇತ್ರಕ್ಕೆ ತೆರಳಿದನು. ಅಲ್ಲಿ ಆ ಧನವನ್ನು ಶಿಲ್ಪಿಗರಿಗೂ ಕಾರ್ಮಿಕರಿಗೂ ಮುಟ್ಟಿಸಿ ತಿರುಗಿ ಬಂದು ಗುರುಸೇವೆಯಲ್ಲಿ ನಿರತನಾದನು. ಹೀಗೆಯೇ ಪ್ರತಿ ತಿಂಗಳಿಗೊಮ್ಮೆ ಗುರುಗಳು ಬೇರೆ ಬೇರೆ ರೀತಿಯಲ್ಲಿ ಧನವನ್ನು ಆ ಲಿಂಗಾಂಗಿಗೆ ದೊರಕಿಸಿ ಕೊಡುತ್ತಿದ್ದರು ಅದನ್ನು ತಕ್ಕೊಂಡು ಹೋಗಿ ಅವನು ಅಲ್ಲಿ ಕಾರ್ಯ ನಿರತರಾದವರಿಗೆ ಮುಟ್ಟಿಸುತ್ತಿದ್ದನು. ಹೀಗೆ ಕೆಲವು ಕಾಲ ಗತಿಸಲು ಒಂದು ದಿವಸ ಗೋಪುರಕ್ಕೆ ಹಾಕಿದ ಕಲ್ಲಿನ ತೊಲೆ ಸೀಳಿದೆ ಎಂಬುದು ಅಲ್ಲಿಯ

(ಪಂಪಾಕ್ಷೇತ್ರದ) ಜನರಿಗೆ ಕಂಡುಬಂದಿತು. ಲಿಂಗಾಂಗಿಯು ನಿತ್ಯಕ್ರಮದಂತೆ ಕಾರ್ಯಕರ್ತರಿಗೆ ವೇತನವನ್ನು ಕೊಡಲಿಕ್ಕಾಗಿ ಬಂದಾಗ ಎಲ್ಲ ಜನರೂ ಗಾಬರಿಗೊಂಡು ಆತನ ಮುಂದೆ ಹೇಳಹತ್ತಿದರು. ಆಗ ಲಿಂಗಾಂಗಿಯು ಆ ಎಲ್ಲ ಜನರನ್ನೂ ಸಂಗಡ ಕರೆದುಕೊಂಡು ರಂಗಾಪುರಕ್ಕೆ ಬಂದು ಗೋಪುರದ ಕಲ್ಲಿನ ತೊಲೆ ಸಿಡಿದದ್ದನ್ನು ಅರುಹಿದನು. ಎಲ್ಲರೂ ಗಾಬರಿಗೊಂಡದ್ದನ್ನು ಕಂಡು ಶ್ರೀ ಬಿಷ್ಟೇಶರು ಭಯಪಡಬೇಡಿರೆಂದು ಹೇಳಿ, ತಾವು ಕುಳಿತಲ್ಲಿಯೇ ವಿಭೂತಿಯಿಂದ ಮೂರು ರೇಖೆಗಳನ್ನು ಎಳೆದರು. ಅದರಿಂದಾಗಿ ಗೋಪುರದಲ್ಲಿ ಭಿನ್ನವಾಗಿದ್ದ ತೊಲೆಯು ಪುನಃ ಭದ್ರವಾಯಿತು. ಆ ಪ್ರಕಾರ ಬಿಷ್ಟಪ್ಪಯ್ಯನವರು ಅವರೆಲ್ಲರಿಗೆ ಹೇಳಿದ್ದರಿಂದ ಎಲ್ಲರೂ ಆಶ್ಚರ್ಯಚಕಿತರಾಗಿ ಪಂಪಾಕ್ಷೇತ್ರಕ್ಕೆ ಬಂದು ನೋಡಲು ಭಿನ್ನವಾದ ತೊಲೆಯು ಭದ್ರವಾಗಿತ್ತು. ಅದನ್ನು ಕಂಡು ಎಲ್ಲರೂ "ಶ್ರೀ ಬಿಷ್ಟಪ್ಪಯ್ಯನವರು ಮಾನವರಾಗಿರದೆ ಪರಮೇಶ್ವರನ ಅವತಾರವೇ ಆಗಿರುವರು" ಎಂದು ಮನಗಂಡು ಬಹಳವಾಗಿ ಕೊಂಡಾಡಿದರು. ಹೀಗೆಯೇ ಕೆಲವು ಕಾಲ ಗತಿಸಿದ ನಂತರ ಒಂದು ದಿವಸ ಯೋಗಿವರ್ಯರು ಲಿಂಗಧಾರಿಯನ್ನು ಹತ್ತರ ಕರೆದು "ಎಲೋ ಶಿಷ್ಯೋತ್ತಮನೇ ನೀನು ಬಹು ಭಕ್ತಿಯಿಂದ ನನ್ನ ಸೇವೆ ಮಾಡಿರುವೆ ಮತ್ತು ಸ್ವಾಮಿಕಾರ್ಯವಾದ ಗೋಪುರದ ಕಟ್ಟಡದ ಕಾರ್ಯದಲ್ಲಿಯೂ ಬಹು ಪ್ರಾಮಾಣಿಕತನದಿಂದ ಶ್ರಮಿಸಿರುವೆ. ಆದಕ್ಕಾಗಿ ನಿನ್ನ ಭಕ್ತಿಗೆ ಮೆಚ್ಚಿರುವೆನು- ನಿನ್ನ ಅಪೇಕ್ಷೆ ಏನಿರುವದು ಕೇಳಿಕೊ ಎಂದು ಹೇಳಲು ಲಿಂಗಧಾರಿಯು "ಗುರುವರ್ಯರೇ ನನಗೆ ಈ ಸಂಸಾರದಲ್ಲಿ ಆಶೆ ಇಲ್ಲ. ತಮ್ಮ ಸೇವೆಯ ಮಹಿಮೆಯು ಈ ಲೋಕದಲ್ಲೆಲ್ಲ ಹೆಚ್ಚಾಗಿ ಬೆಳೆಯಲೆಂಬುದೇ ನನ್ನ ಇಚ್ಛೆ ಅದಕ್ಕಾಗಿ ನಾನು ತಮ್ಮಲ್ಲಿ ವರ ಬೇಡುವದೇನಂದರೆ ನಾನು ಸದೇಹವಾಗಿಯೇ ಕೈಲಾಸಕ್ಕೆ ಹೋಗುವಂತೆ ವರವನ್ನು ನೀಡಬೇಕು'' ಎಂದು ಕೇಳಿಕೊಳ್ಳಲು ಗುರುಗಳು ಮುಗುಳುನಗೆಯಿಂದ ''ಭಕ್ತಶ್ರೇಷ್ಠನೇ! ನಿನ್ನ ಸೇವೆಯು ಶಿವನಿಗೆ ಮೆಚ್ಚುಗೆಯಾಗಿರುವದು. ಕಾರಣ ನಿನ್ನ ಇಚ್ಛೆ ಇದ್ದಂತೆ ಆಗುವದು ಎಂದು ವರವನ್ನು ನೀಡಿದರು.

ಲಿಂಗಧಾರಿಯು ಈ ಮಾತನ್ನು ಕೇಳಿ ಸಂತುಷ್ಟನಾಗಿ ತಮ್ಮ ಜಾತಿಯ ನಿಯಮದ ಪ್ರಕಾರ ವಿಧಿಪೂರ್ವಕವಾಗಿ ಮೂವತ್ನಾಲ್ಕುಪ್ರಮಾಣದ ಆಳವಾದ ತೆಗ್ಗನ್ನು ತೆಗೆಯಿಸಿ ಅದರಲ್ಲಿ ಕುಳಿತುಕೊಂಡು ಲಿಂಗವನ್ನು ಕೈಯಲ್ಲಿ ಹಿಡಿದವ

ನಾಗಿ ಶಿವಧ್ಯಾನದಲ್ಲಿ ಮಗ್ನನಾಗಲು ಶ್ರೀ ಬಿಷ್ಟೇಶ ಯೋಗಿಗಳವರ ಪ್ರೇರಣೆಯಂತೆ ಶಿವಲೋಕದಿಂದ ವಿಮಾನವು ಕೆಳಗೆ ಇಳಿದದ್ದನ್ನು ಕಂಡು ಪುರಜನರು ಎಲ್ಲರೂ ಅತ್ಯಾಶ್ಚರ್ಯದಿಂದಲೂ ಭಕ್ತಿಯಿಂದಲೂ ಕೂಡಿದವರಾಗಿ ಅಲ್ಲಿ ನೆರೆದರು. ಹೀಗೆ ಎಲ್ಲ ಜನರೂ ನೋಡುತ್ತಿರುವಷ್ಟರಲ್ಲಿಯೇ ಲಿಂಗಧಾರಿಯು ಸದೇಹವಾಗಿಯೇ ವಿಮಾನವನ್ನೇರಲು ವಿಮಾನವು ಮೇಲಕ್ಕೆ ಹಾರಿ ಹೋಯಿತು. ಇದನ್ನೆಲ್ಲಾ ಕಣ್ಣಾರೆ ಕಂಡ ಜನರೆಲ್ಲರೂ ಇಂಥ ಅಘಟಿತ ಕಾರ್ಯಗಳು ಸಾಮಾನ್ಯ ಮನುಷ್ಯರಿಂದ ಜರುಗಲು ಸಾಧ್ಯವಿಲ್ಲ. ಪ್ರತ್ಯಕ್ಷ ಶಂಕರನೇ ಮಾನವರೂಪದಿಂದ ಬಂದು ಶ್ರೀ ಬಿಷ್ಟೇಶರ ಸೇವೆಮಾಡಿರಬಹುದು ಎಂದು ಮುಂತಾಗಿ ಶ್ರೀ ಬಿಷ್ಟೇಶರನ್ನೂ ಲಿಂಗಧಾರಿಯನ್ನೂ ಭಕ್ತಿಯಿಂದ ಹೊಗಳಿಕೊಳ್ಳುತ್ತ ತಮ್ಮ ತಮ್ಮ ಮನೆಗಳಿಗೆ ಹೋದರು. ಈ ರೀತಿಯ ಅಸಾಧಾರಣ ಮಹಿಮೆಗಳನ್ನು ತೋರಿಸುತ್ತ ಜನರಲ್ಲಿ ಶಿವಭಕ್ತಿ ಬೆಳೆಯುವಂತೆ ಮಾಡುತ್ತಿದ್ದರು.



## ಪ್ರಕರಣ ೧೩

# ರಸಲಿಂಗ ( ಮಹಾಲಿಂಗ ) ಪ್ರಾಪ್ತಿ

ಶ್ರೀ ಬಿಷ್ಟೇಶರ ಅವತಾರ ಕಾರ್ಯಗಳೆಂದರೆ ಮ್ಲೇಂಛರಿಂದ ಅಪವಿತ್ರ ವಾದಂಥ ಉಧ್ವಸ್ತವಾದಂಥ ಪವಿತ್ರ ಕ್ಷೇತ್ರಗಳನ್ನೂ ದೇವಾಲಯ, ವಿಗ್ರಹ ಗಳನ್ನೂ ಪುನರುದ್ಧರಿಸಿ ಪಾವನಗೊಳಿಸುವದೂ ಜನತೆಯಲ್ಲಿ ದೈವಭಕ್ತಿ, ಸದಾಚಾರ, ಧರ್ಮಭಾವನೆ ಬೆಳೆಯುವಂತೆ ತಮ್ಮ ಸ್ವಂತದ ಆಚಾರ ವಿಚಾರ ಗಳಿಂದ ಅನೇಕ ಕಾರ್ಯಗಳನ್ನು ಮಾಡುವದು. ಅದಕ್ಕಾಗಿಯೇ ಅನೇಕ ಪವಾಡಗಳನ್ನು ಮಾಡಿ ತೋರಿಸಿ ಶಿವಭಕ್ತರಲ್ಲಿ ಎಂಥ ಸಾಮರ್ಥ್ಯವಿರುತ್ತದೆ ಎಂಬುದನ್ನು ಜನತೆಗೆ ಮನಗಾಣಿಸಿಕೊಟ್ಟರು. ಆದೇ ಪ್ರಕಾರ ಭಕ್ತರಿಗೆ ಶಿವ ಪೂಜೆಗೆ ಅನುಕೂಲ ಆಗಬೇಕೆಂತಲೂ ಕೆಲವರಿಗಾದರೂ ಶಿವಪೂಜಾದಿ ವಿಧಾನಗಳು ತಿಳಿಯಲೆಂತಲೂ ಉದ್ದೇಶವನ್ನಿಟ್ಟುಕೊಂಡು ಅವರು ತಮ್ಮ ಕುಟೀರದಲ್ಲಿದ್ದುಕೊಂಡು ಪ್ರತಿ ದಿವಸವೂ ಒಂದೊಂದರಂತೆ ಶಿವಲಿಂಗವನ್ನು ಮಾಡಿ ತಮ್ಮ ಭಕ್ತಜನರಲ್ಲಿ ನಿತ್ಯವೂ ಒಬ್ಬೊಬ್ಬರಿಗೆ ದಾನವಾಗಿ ಕೊಟ್ಟು ಶಿವಪೂಜಾದಿ ವಿಧಾನಗಳಳನ್ನು ತಿಳಿಯಪಡಿಸಹತ್ತಿದರು. ಇದೇ ಕ್ರಮದಂತೆ ಇಪ್ಪತ್ತು ದಿವಸಗಳ ವರೆಗೆ ಇಪ್ಪತ್ತು ಶಿವಲಿಂಗಗಳನ್ನುಮಾಡಿ ದಾನಕೊಟ್ಟರು. ಇಪ್ಪತ್ತೊಂದನೆಯ ದಿವಸ ಇಪ್ಪತ್ತೊಂದನೇ ಲಿಂಗವನ್ನು ನಿರ್ಮಿಸುವದಕ್ಕಾಗಿ ಭಕ್ತಿಪೂರ್ವಕವಾಗಿ ಸನಾತನ ರೂಪಿಯಾದ ಪರಮೇಶ್ವರನ ಸ್ತೋತ್ರವನ್ನು ಮಾಡಹತ್ತಲು ಅವರು ಕುಳಿತಿರುವ ಗುಡಿಸಲಿನ ಸುತ್ತಲೂ ಭೂಮಿಗೂ ಆಕಾಶಕ್ಕೂ ಏಕಾಕಾರವಾಗಿ ಅಗ್ನಿಜ್ವಾಲೆಯು ಹಬ್ಬುತ್ತಿರುವದು ಜನರ ದೃಷ್ಟಿಗೆ ಗೋಚರಿಸಿತು. ಆದರೆ ಆ ಜ್ವಾಲೆಯಲ್ಲಿಯೇ ಪರಮಾತ್ಮನು ಬಿಷ್ಟೇಶರಿಗೆ ದರ್ಶನ ಕೊಟ್ಟನು. ಸಾಕ್ಷಾತ್ ಪರಮಾತ್ಮನನ್ನು ಕಂಡ ಬಿಷ್ಟೇಶರು ಆತನಿಗೆ ಅನನ್ಯಭಕ್ತಿಯಿಂದ ಬಾಗಿ ನಮಸ್ಕಾರ ಮಾಡುತ್ತಿರಲು ಪರಮಾತ್ಮನು ಅವರಿಗೆ ಒಂದು ರಸಲಿಂಗ ( ಮಹಾಲಿಂಗ ) ವನ್ನು ನೀಡಿ



ಶ್ರೀಮದಾದ್ಯ ಬಿಷ್ಟಪ್ಪಯ್ಯನವರಿಗೆ ಪರಮಾತ್ಮನಿಂದ ದೊರೆತ
ರಸಲಿಂಗ

ಜ್ವಾಲೆಯೊಂದಿಗೆ ಅಂತರ್ಧಾನ ಹೊಂದಿದನು. ಜನರೆಲ್ಲರು ಗುಡಿಸಲಿಗೆ ಬೆಂಕೆ ಹತ್ತಿದ್ದನ್ನು ನೋಡಿ ಬಿಷ್ಟೇಶರು ಅಗ್ನಿಜ್ವಾಲೆಯಲ್ಲಿ ಸುಟ್ಟುಹೋದರೆಂದು ಗಾಬರಿಗೊಂಡು ಊರಲ್ಲೆಲ್ಲ ಸುದ್ದಿಯನ್ನು ಹರಡಿಸಿದರು. ಎಲ್ಲರೂ ಬಂದು ಜ್ವಾಲೆಯನ್ನು ನೋಡಿ ದುಃಖಿಸಹತ್ತಿದರು. ಅಷ್ಟರಲ್ಲಿ ಜ್ವಾಲೆಯು ಇಲ್ಲದಂತೆ ಆಗಿ ಆ ಸ್ಥಳವಲ್ಲಿ ಪರಮಾತ್ಮನನ್ನು ನಮಸ್ಕರಿಸುವದಕ್ಕಾಗಿ ಬಾಗಿ ನಿಂತಿರುವ ಬಿಷ್ಟೇಶರನ್ನು ಮಾತ್ರ ಎಲ್ಲರೂ ಕಂಡು ಆನಂದಭರಿತರಾದರು. ಮತ್ತು ಇದೆಲ್ಲವೂ ಆ ಮಹಾಯೋಗಿವರ್ಯನ ಮಹಿಮೆಯೇ ಎಂದು ತಿಳಿದು ಆಶನನ್ನು ಬಹುವಾಗಿ ಹೊಗಳಿಕೊಳ್ಳುತ್ತ ಮನೆಗೆ ನಡೆದರು. ಸಾಕ್ಷಾತ್ ಪರಮಾತ್ಮನ ಹಸ್ತದಿಂದಲೇ ದೊರೆತ ಈ ರಸಲಿಂಗವನ್ನೇ ಶ್ರೀ ಬಿಷ್ಟೇಶರು ಅಂಗೈಯಲ್ಲಿ ಇಟ್ಟುಕೊಂಡು ನಿತ್ಯವೂ ಸರ್ವೋಪಚಾರಗಳಿಂದ ಪೂಜಿಸ ಹತ್ತಿದರು. ಈ ರಸಲಿಂಗವು ಬಂಗಾರಕಾಂತಿಯುಳ್ಳದ್ದೂ ಅತ್ಯಂತ ಭಾರ ವಾದದ್ದೂ ಇರುವದರಿಂದ ಈಗ ಅದು "ಮಹಾಲಿಂಗ"ವೆಂಬ'' ಹೆಸರಿನಿಂದ ಅವರ ಮನೆತನದವರಲ್ಲಿ ಈಗಲೂ ಪೂಜೆಗೊಳ್ಳುತ್ತದೆ.

———

## ಪ್ರಕರಣ ೧೪

# ಶಿವಪ್ಪಯ್ಯನವರ ಶಿವರೂಪತ್ವ

ಶ್ರೀಪರಮೇಶ್ವರನಿಂದಲೇ ದೊರೆತ ರಸಲಿಂಗವನ್ನು ನಿತ್ಯವೂ ಸರ್ವೋಪಚಾರದಿಂದ ಪೂಜಿಸುತ್ತ ಪೂಜಾನುಷ್ಠಾನಗಳಲ್ಲಿ ಕೆಲವು ಕಾಲ ಕಳೆದರು. ಅಷ್ಟರಲ್ಲಿ ಪಂಪಾಪತಿಯ ದೇವಾಲಯ ಪೂರ್ವ ಮಹಾದ್ವಾರದ ಮೇಲಿನ ಗೋಪುರದ ಕಟ್ಟಡವು ಪೂರ್ತಿಯಾದದ್ದು ತಿಳಿಯಿತು. ಆದರಿಂದ ಶ್ರೀ ಬಿಷ್ಟಪ್ಪಯ್ಯನವರಿಗೆ ಅತ್ಯಾನಂದವಾಯಿತು. ಈ ಗೋಪುರ ಕಟ್ಟಿಸಿದ ಕಾಲ ಅಥವಾ ಬಿಷ್ಟಪ್ಪಯ್ಯನವರು ಬಾಳಿದ ಕಾಲದ ಬಗೆಗೆ ಐತಿಹಾಸಿಕ ಆಧಾರಗಳು ಏನೂ ನಮಗೆ ದೊರೆಯದಿದ್ದರೂ ಜನಮತವು ಮೂಕವಾಗಿಲ್ಲ. ಮೂರು ಮೂರೂವರೆ ಶತಮಾನಗಳ ಕಾಲ ಗತಿಸಿ ಹೋಗಿದ್ದರೂ, ಇಂದಿಗೂ ಈ ಗೋಪುರಕ್ಕೆ ಬಿಷ್ಟಪ್ಪಯ್ಯನವರ ಗೋಪುರವೆಂದು ಜನವಾಣಿ ಸಾರುತ್ತದೆ ಮತ್ತು ಮಹಿಮೆಯನ್ನು ಜನರು ಹಲವು ರೀತಿಯಲ್ಲಿ ವರ್ಣಿಸುತ್ತಾರೆ. ಬಹು ಪ್ರಯಾಸದಿಂದ ಕಟ್ಟಿಸಲಾರಂಭಿಸಿದ ಗೋಪುರವು ಪೂರ್ತಿಯಾದದ್ದು ಕೇಳಿ ಬಿಷ್ಟಪ್ಪಯ್ಯನವರಿಗೆ ಅತ್ಯಾನಂದವಾದದ್ದರಲ್ಲಿ ಏನೂ ಆಶ್ಚರ್ಯವಿಲ್ಲ. ಆದರೆ ಪರಮಾತ್ಮನ ಇಚ್ಛೆಯನ್ನರಿತವರಾದ ಅವರು ಕೂಡಲೇ ತಮ್ಮ ಮಗನಾದ ಶಿವಪ್ಪಯ್ಯನನ್ನು ಕರೆದು "ಮಗು' ಗೋಪುರದ ಕಟ್ಟಡ ಕಾರ್ಯವು ಪೂರ್ಣವಾಯಿತು. ಆದರೆ ಕುತೂಹಲದಿಂದ ನೀನು ಅದನ್ನು ನೋಡ ಕೂಡದು. ಹಾಗೆ ಶ್ರೀ ಪಂಪಾಪತಿಯ ಆಜ್ಞೆ ಇರುತ್ತದೆ ಎಂದು ಹೇಳಿದರು. ಪಿತೃಆಜ್ಞೆಯನ್ನು ಶಿರಸಾವಹಿಸಿದವರಾಗಿ ಶಿವಪ್ಪಯ್ಯನವರು ಸ್ವಗೃಹದಲ್ಲಿಯೇ ಶಿವಾರ್ಚನೆ, ಧ್ಯಾನ, ಭಜನೆಗಳಲ್ಲಿ ನಿರತರಾಗಿ ಇರಹತ್ತಿದರು. ಹೀಗೆ ಕೆಲವು ಕಾಲ ಕಳೆಯುತ್ತಿರಲು ಅವರ ಪತ್ನಿಯವರಾದ ತ್ರಿವೇಣ್ಯಮ್ಮನವರು ಗರ್ಭವತಿ ಆದದ್ದು ತಿಳಿಯಿತು. ಮಹಾತೇಜಸ್ವಿಯೂ ಸುಂದರವೂ ಆಗಿರುವ ಗರ್ಭಗತ ಶಿಶುವನ್ನು ತಮ್ಮ ಅಂತಜ್ಞಾನದಿಂದ ನೋಡಿದವರಾಗಿ ಶ್ರೀ ಬಿಷ್ಟಪ್ಪಯ್ಯನವರು ಆ ಶಿಶುವು ಮುಂದೆ ಮಹಾಯೋಗಿಯಾಗುವನೆಂದು ತಿಳಿದು ಆನಂದ ಭರಿತರಾದರು. ನಂತರ ಶಿವಾರ್ಯರು ತಂದೆಯವರನ್ನು ನಮಸ್ಕರಿಸಿ,

ಅವರಿಂದ ಅಪ್ಪಣೆಪಡೆದು ಕೆಲವು ಶಿಷ್ಯರನ್ನೊಡಗೊಂಡು ಯಾತ್ರಾರ್ಥವಾಗಿ ಹೊರಟರು. ಶಿಷ್ಯರೊಡನೆ ಕೆಲವು ಯಾತ್ರಾ ಸ್ಥಳಗಳಲ್ಲಿ ಸಂಚಾರಮಾಡಿ ಕೋಟೀಶ್ವರ (ಕೊಟ್ಟಕಲ್ಲು) ಎಂಬಲ್ಲಿಗೆ ಬಂದರು. ಅಲ್ಲಿ ತಪಸ್ಸು ಮಾಡ ಬೇಕೆಂಬ ಉದ್ದೇಶದಿಂದ ಸಂಗಡ ಬಂದಿದ್ದ ಎಲ್ಲ ಶಿಷ್ಯರಿಗೂ ಅನುಗ್ರಹ ನೀಡಿ ಕಳುಹಿದರು. ಮತ್ತು ಅಲ್ಲಿ ಕೆಲವು ಕಾಲ ತಪಶ್ಚರ್ಯ ಮಾಡಿದವರಾಗಿ, ಮುಂದೆ ಪಂಪಾಕ್ಷೇತ್ರದ ದಕ್ಷಿಣ ಭಾಗದಲ್ಲಿ ಇರುವ ಜಾಂಬುಕೇಶ್ವರಕ್ಕೆ ಹೋಗಿ ಅಲ್ಲಿ ಜಾಂಬುವಂತನಿಂದ ಪೂಜಿಸಲ್ಪಟ್ಟ ಶಿವಲಿಂಗದ ದರ್ಶನ ಮಾಡಿ ಕೊಂಡು ಆ ಪರ್ವತದ ಶಿಖರವನ್ನು ಏರಿದರು. ಅಲ್ಲಿ ಸ್ವಲ್ಪ ವೇಳೆ ವಿಶ್ರಮಿಸು ತ್ತಿರಲು ಸಹಜವಾಗಿ ಸೂರ್ಯಪ್ರಕಾಶದಂತೆ ಹೊಳೆಯುತ್ತಿರುವ ಪಂಪಾ ಕ್ಷೇತ್ರದ ಗೋಪುರವು ದೃಷ್ಟಿಗೋಚರವಾಯಿತು ಆಗ ಪಿತೃ ಆಜ್ಞೆಯು ಸ್ಮರಣವಾಗಿ ಮನಸ್ಸಿನಲ್ಲಿ ವ್ಯಾಕುಲಗೊಂಡು ಪುನಃ ಕೋಟೀಶ್ವರಕ್ಕೆ ಹೋಗಿ. ಅಲ್ಲಿ ಧ್ಯಾನಾಸಕ್ತರಾದರು. ಅಲ್ಲಿಯೇ ಶಿವನ ಇಚ್ಛೆಯಂತೆ ಶಿವಪ್ಪಯ್ಯನವರು ಕಾರ್ತೀಕ ಕೃಷ್ಣಪಕ್ಷ ಅಮಾವಾಸ್ಯೆಯ ದಿವಸ ಶಿವರೂಪವನ್ನು ಹೊಂದಿದರು.

ಆ ಸಮಯದಲ್ಲಿ ಶ್ರೀ ಬಿಷ್ಟೇಶರು ರಂಗಾಪುರದಲ್ಲಿ ಇದ್ದರು. ಶ್ರೀ ರಾಮೇಶ್ವರ ದೇವಾಲಯದೊಳಗಿಂದ ಶಿವ, ಶಿವ ಎಂದು ಶಿವನಾಮೋಚ್ಚಾರ ಮಾಡುತ್ತ ಹೊರಗೆ ಬಂದು ಶಿಷ್ಯರೆಲ್ಲರನ್ನೂ ಎಬ್ಬಿಸಿ, ಸ್ನಾನಾರ್ಥವಾಗಿ ತುಂಗಭದ್ರೆಗೆ ನಡೆದರು. ಶಿಷ್ಯರೆಲ್ಲರೂ ದಿಙ್ಮೂಢರಾಗಿ ತಾವೂ ಅವರನ್ನು ಹಿಂಬಾಲಿಸಿ ನದಿಗೆ ನಡೆದರು. ಈ ವೇಳೆಯಲ್ಲಿ ಗುರುಗಳು ಸ್ನಾನಮಾಡುವ ಕಾರಣವು ತಿಳಿಯದ್ದರಿಂದ ಅವರು ಗುರುಗಳ ಹತ್ತರ ಬಂದು ಭಯದಿಂದ ಕಂಪಿತರಾಗಿ ಭೋ ! ಗುರುಗಳೇ! ಈಗ ಸ್ನಾನದ ಸಮಯವಲ್ಲವಲ್ಲಾ ಎಂದು ವಿನಯದಿಂದ ಕೇಳಿದರು. ಆಗ ಆ ಯೋಗಿವರ್ಯರು "ಶಿಷ್ಯೋತ್ತಮರೇ! ಮಹಾತ್ಮನಾದ ಕಲಿಯ ಪ್ರಭಾವವು ಹೆಚ್ಚಾಯಿತು. ಭೂಮಿಯ ಮೇಲೆ ಪಾಪವು ಹೆಚ್ಚಾಯಿತು. ಸಾಧು ಜನರಿಗೆ ಸ್ಥಾನವಿಲ್ಲದಾಯಿತು. ಆದ್ದರಿಂದ ನಮ್ಮ ಶಿವನು ಇಂದು ಶಿವನಲ್ಲಿ ಲೀನನಾದನು. ಸಾಕಾರತ್ವವನ್ನು ತ್ಯಜಿಸಿ ಶಿವನು ನಿರಾಕಾರನಾದನು." ಎಂದು ಹೇಳಿದರು.

ಯೋಗೀಶರು ಹೇಳಿದ ಈ ವಾರ್ತೆಯು ಒಂದೆರಡು ಕ್ಷಣದಲ್ಲಿ ಎಲ್ಲ ಕಡೆಗೂ ಪಸರಿಸಿತು. ಪುರಜನರೆಲ್ಲರೂ ದುಃಖಸಾಗರದಲ್ಲಿ ಮುಳುಗಿದರು.

ಶಿವಪ್ಪಯ್ಯನವರ ಪತ್ನಿ ತ್ರಿವೇಣ್ಯಮ್ಮನವರಿಗೆ ಈ ವಾರ್ತೆಯು ಸಿಡಿಲು ಬಡಿದಂತೆ ಬಾಧಿಸಿತು. ಕೂಡಲೇ ಅವರು ಶೋಕಭರಿತರಾಗಿ ಮಾವನವರಾದ ಶ್ರೀ ಬಿಷ್ಟೇಶ ಯೋಗಿಗಳ ಹತ್ತರ ಬಂದು "ಯೋಗಿವರ್ಯರೇ ನಾನು ಶಿವ ಹೀನಳಾಗಿ (ವಿಧವೆಯಾಗಿ) ಹೇಗೆ ಜೀವಿಸಲಿ, ನನಗೆ ಸತಿಹೋಗಲು ಅಪ್ಪಣೆ ಕೊಡಬೇಕು"ಎಂದು ಕೇಳಿಕೊಂಡಳು. ಆಗ ಯೋಗಿವರ್ಯರು ಸುಮಧ್ಯಮಳೇ ನೀನಾರು? ಅವನಾರು? ಅವನಿಗಾಗಿ ಏಕೆ ದುಃಖಿಸುವೆ? ನಿನ್ನಾತ್ಮನೇ ಶಿವನು. ಆತನನ್ನೇ ನೀನು ಸ್ಮರಿಸು. ನೀನೇ ಶಿವಸ್ವರೂಪಿ ಆಗಿರುವಾಗ ಅದಕ್ಕಾಗಿ ಏಕೆ ದುಃಖಿಸುವೆ? ಜಗತ್ತಿನಲ್ಲಿ ಎಲ್ಲವೂ ಪರಮಾತ್ಮಸ್ವರೂಪವು. ಅದಕ್ಕಾಗಿ ನೀನು ಶವಕ್ಕಾಗಿ ದುಃಖಿಸುವದನ್ನು ಬಿಟ್ಟು ಶಿವನನ್ನು ಸ್ಮರಿಸು. ಅಲ್ಲದೆ ನೀನು ಗರ್ಭಿಣಿಯಾಗಿರುವೆ. ಆದ್ದರಿಂದ ಸಹಗಮನಕ್ಕೆ ನಿನಗೆ ಅಧಿಕಾರವಿಲ್ಲ. ನಿನ್ನ ಗರ್ಭದಲ್ಲಿ ಮಹಾದೇವನು ಜನಿಸುವನು. ನಿನ್ನ ಗರ್ಭದಲ್ಲಿ ಹುಟ್ಟಿದ ಆ ಮಹಾದೇವನು ನಿಃಸಂದೇಹವಾಗಿ ರಾಜಯೋಗಿಯಾಗುವನು. ಆ ಮಹಾದೇವನು ಯೋಗಮಾರ್ಗದಿಂದ ಸರ್ವಸಿದ್ಧಿಯನ್ನು ಪಡೆಯುವನು. ಜಗತ್ತಿನಲ್ಲಿ ಖ್ಯಾತಿವಂತನಾಗುವನು." ಈ ಮೇರೆಗೆ ಮಾವನವರೂ ಗುರುಗಳೂ ಯೋಗೀಶ್ವರರೂ ಆದ ಶ್ರೀ ಬಿಷ್ಟೇಶರ ಮಾತುಗಳನ್ನು ಕೇಳಿ ತ್ರಿವೇಣ್ಯಮ್ಮನವರು ಸಮಾಧಾನಪಟ್ಟರು.

ಮುಂದೆ ಸ್ವಲ್ಪೇ ದಿವಸಗಳಲ್ಲಿ ಗ್ರಹಗಳು ಉಚ್ಚರಾಗಿದ್ದು ಗುರು ಚಂದ್ರ ಮಂಗಳರು ಪರಸ್ಪರರನ್ನು ಶುಭಯೋಗಮಾಡುತ್ತಿರುವ ಶುಭಲಗ್ನಸಮಯದಲ್ಲಿ ತ್ರಿವೇಣ್ಯಮ್ಮನವರು ಪಾರ್ವತಿಯು ಷಣ್ಮುಖನನ್ನು ಹೆತ್ತಂತೆ ಮಹಾದೇವನನ್ನು ಹಡೆದರು. ಆಗ ತಮ್ಮ ವಂಶಭೂಷಣನಾದ ಮೊಮ್ಮಗನನ್ನು ನೋಡಿ, ಶ್ರೀ ಬಿಷ್ಟಪ್ಪಯ್ಯನವರು ಆನಂದಭರಿತರಾದರು. ಮತ್ತು ಶಿಶುವಿನ ಲಕ್ಷಣಗಳನ್ನೂ ಜನ್ಮಕಾಲದ ಗ್ರಹಸ್ಥಿತಿಯನ್ನೂ ನೋಡಿ ಆ ಮಗುವು ಮುಂದೆ ಅಸಾಮಾನ್ಯ ಬಲ ಪೌರುಷವುಳ್ಳವನೂ ಜಗತ್ತಿನಲ್ಲಿ ಖ್ಯಾತಿವಂತನೂ ಆಗುತ್ತಾನೆ ಮತ್ತು ತಾನು ಕಟ್ಟಿಸಿದ ಗೋಪುರಕ್ಕೆ ಕಳಸವನ್ನು ಸ್ಥಾಪಿಸುತ್ತಾನೆ ಎಂದು ಭವಿಷ್ಯವನ್ನು ಹೇಳಿದರು.

ಈ ಪ್ರಕಾರ ಸೊಸೆಗೆ ಹೇಳಿದವರಾಗಿ ಕೆಲವು ಕಾಲದ ವರೆಗೆ ಬಿಷ್ಟೇಶರು ಧ್ಯಾನಮಗ್ನರಾಗಿ ಕುಳಿತರು ನಂತರ ಇನ್ನೂ ಕೆಲವು ಲೋಕೋತ್ತರ

ಕಾರ್ಯಗಳನ್ನು ಮಾಡಿದರು. ಶಿವಲೀನನಾದ ತನ್ನ ಮಗ ಶಿವಪ್ಪಯ್ಯನವರ ಕೀರ್ತಿ ಲೋಕದಲ್ಲಿ ಸ್ಥಿರವಾಗಿ ಉಳಿಯಲೆಂಬ ಉದ್ದೇಶದಿಂದಲೂ ತಮ್ಮ ವಂಶಕ್ಕೆ ಶ್ರೇಯೋಭಿವೃದ್ಧಿ ಲಭಿಸಲೆಂದೂ ಪ್ರತಿವರ್ಷ ಕಾರ್ತಿಕಕೃಷ್ಣಪಕ್ಷ ಅಮಾವಾಸ್ಯೆಯ ದಿವಸ ಶಿವಾರಾಧನೆ (ಶಿವಪ್ಪಯ್ಯನವರು ಶಿವಲೀನರಾದ ದಿನಾಚರಣೆಯನ್ನು) ಅತಿ ವಿಜೃಂಭಣೆಯಿಂದ ಬಾಲಯೋಗಿ ಮಹಾದೇವಪ್ಪಯ್ಯನವರ ಹಸ್ತಸ್ಪರ್ಶದಿಂದ ಮಾಡಿಸಹತ್ತಿದರು ಈ ಆರಾಧನೆಗೆ ಶಿವಭಕ್ತಗಣವು ಬಹುಸಂಖ್ಯೆಯಲ್ಲಿ ನೆರೆಯುತ್ತಿತ್ತು ಮಹಾಸಾಧ್ವಿ ತ್ರಿವೇಣ್ಯಾವ್ವನವರು ಕೂಡಿದ ಭಕ್ತಜನರಿಗೆ ತೀರ್ಥ, ಪ್ರಸಾದ, ಭಸ್ಮಾದಿಗಳನ್ನು ಕೊಟ್ಟು ಪಾವನಗೊಳಿಸುತ್ತಿದ್ದರು ಈ ಆರಾಧನೆಯು ಇಂದಿಗೂ ಪ್ರತಿವರ್ಷ ಜರಗುತ್ತಿದ್ದು ಇದು ಈಗ "ಘಟ್ಟೀ ಆರಾಧನೆ" ಎಂದು ಗುರ್ತಿಸಲಾಗುತ್ತಿದೆ

— — — —

# ಪ್ರಕರಣ ೧೫

# ಅವತಾರ ಸಮಾಪ್ತಿ

ಕೆಲವು ದಿವಸಗಳ ನಂತರ ಬಿಷ್ಟಪ್ಪಯ್ಯನವರು ತಮ್ಮ ಮೊಮ್ಮಗನಾದ ಮಹಾದೇವಪ್ಪಯ್ಯನ ಉಪನಯನವನ್ನು ನೆರವೇರಿಸಿದರು. ಹೃತ್ಪೂರ್ವಕ ಅಂತಃಕರಣದಿಂದ ಆತನ ತಲೆಯ ಮೇಲೆ ತಮ್ಮ ವರದಹಸ್ತವನ್ನಿಟ್ಟು ಕಿವಿಯಲ್ಲಿ ಮಂತ್ರೋಪದೇಶವನ್ನು ಮಾಡಿದರು. ಆಮೇಲೆ ಸೊಸೆಯಾದ ತ್ರಿವೇಣ್ಯಮ್ಮನನ್ನು ಹತ್ತಿರ ಕರೆದು "ಸಾಧ್ವಿಯೇ ಅಂಜಬೇಡ, ನಿನಗೆ ಶ್ರೀ ವಿರುಪಾಕ್ಷೇಶನು ದಯತೋರುವನು ನಿನ್ನ ಮಗನನ್ನು ಜೋಪಾನ ಮಾಡಿ ನನ್ನ ವಂಶವನ್ನು ಭೂಷಣಗೊಳಿಸು. ನಾನಿನ್ನು ಹೋಗುವೆನು" ಎಂದು ಸೊಸೆಗೆ ಧೈರ್ಯ ಹೇಳಿ ತಾವು ಚ್ಯವನಾಶ್ರಮಕ್ಕೆ ಪ್ರಯಾಣಮಾಡಿದರು. ಅಲ್ಲಿ ಶಂಕರನೇ ಯೋಗಿ ಗುರು) ಎಂದು ಭಾವಿಸಿ, ಆತನಿಂದಲೇ ಚತುರ್ಥ ಆಶ್ರಮ (ಸಂನ್ಯಾಸ)ದ ದೀಕ್ಷೆಯನ್ನು ಪಡೆದುಕೊಂಡವರಾಗಿ ಅಲ್ಲಿಯೇ ಒಂದು ಶಿವಲಿಂಗವನ್ನು ಸ್ಥಾಪಿಸಿ. ಧ್ಯಾನಮಗ್ನರಾಗಿ ಇರುತ್ತಿದ್ದರು. ಈ ಚ್ಯವನಾಶ್ರಮವು ವಿಠ್ಠಲಪುರದ ಪಶ್ಚಿಮಕ್ಕೆ ನದೀ ಮಧ್ಯದಲ್ಲಿ ನಡುಗಡ್ಡೆಯಲ್ಲಿ ಇತ್ತೆಂದು ತುಂಗಭದ್ರಾ ಮಹಾತ್ಮೆಯಲ್ಲಿ ಉಲ್ಲೇಖವಿರುತ್ತದೆ. ಅಲ್ಲದೇ ಅಲ್ಲಿ ಸುತ್ತುಮುತ್ತಲಿನ ಜನರಾದರೂ ಇಂದಿಗೂ ಈ ಮಾತನ್ನೇ ಹೇಳುತ್ತಾರೆ. ಅಲ್ಲಿ ಒಂದು ಬಿಲ್ವವೃಕ್ಷದ ಬುಡದಲ್ಲಿ ಇರುವ ಶಿವಲಿಂಗವೇ ಶ್ರೀ ಬಿಷ್ಟಪ್ಪಯ್ಯನವರು ಸ್ಥಾಪಿಸಿದ್ದು. ಇದರ ಸಮೀಪದಲ್ಲಿ ಇರುವ ಒಂದು ಕಟ್ಟೆಯು ಅವರು ತಪಸ್ಸು ಮಾಡಿದ ಸ್ಥಳವೆಂತಲೂ ಜನರು ಹೇಳುತ್ತಾರೆ. ಮತ್ತು ಮೇವುಂಡಿಯಲ್ಲಿ ಇರುತ್ತಿರುವ ಶ್ರೀ ಬಿಷ್ಟಪ್ಪಯ್ಯನವರ ವಂಶಸ್ಥರಾದ ಬಿಷ್ಟಪ್ಪಯ್ಯನವರು ಶಿವರಾತ್ರಿ. ಪುಣ್ಯಕಾಲ, ಪರ್ವಕಾಲಗಳಲ್ಲಿ ಇಲ್ಲಿಗೆ ಬಂದು ಅಭಿಷೇಕ,ನೈವೇದ್ಯ, ಬ್ರಾಹ್ಮಣ ಭೋಜನಾದಿಗಳನ್ನು ಮಾಡಿಸುತ್ತಾರೆ ಈ ಚ್ಯವನಾಶ್ರಮವು ಈಗ ಶ್ರೀ ಶಂಕರಲಿಂಗನ ಗಡ್ಡಿ ಎಂದು ಗುರ್ತಿಸಲ್ಪಡುತ್ತದೆ.

ಈ ಚ್ಯವನಾಶ್ರಮದಲ್ಲಿ ಶ್ರೀ ಬಿಷ್ಟಪ್ಪಯ್ಯನವರು ಕೆಲವು ಕಾಲ ಕಳೆದ ನಂತರ ವೇಣುಪಲ್ಲಿಯ ಹತ್ತಿರ ನದಿಯ ಮಧ್ಯದಲ್ಲಿ ಇರುವ ಶಿವತೀರ್ಥಕ್ಕೆ ಹೋಗಿ ಅಲ್ಲಿ ಜಂಬುಕೇಶ್ವರನ ಸಾನ್ನಿಧ್ಯದಲ್ಲಿ ಒಂದು ತಿಂಗಳು ಅನುಷ್ಠಾನವನ್ನು ಮಾಡಿ ಅಲ್ಲಿಯೇ ಸಮೀಪದಲ್ಲಿರುವ ಬಂಡೆಗಲ್ಲುಗಳ ಸಾಲಿನಲ್ಲಿ "ದುರ್ಗದ ಕಲ್ಲು" ಎಂದು ಈಗ ಸಂಬೋಧಿಸಲ್ಪಡುತ್ತಿರುವ ಕಲ್ಲಿನ ಬಳಿಯಲ್ಲಿ ನೀರಿನ ಮೇಲೆ ಪದ್ಮಾಸನವನ್ನು ಹಾಕಿ ಕುಳಿತು ಹಾಗೆಯೇ ಪಂಪಾಕ್ಷೇತ್ರಕ್ಕೆ ಹೋದರೆಂದು ಭಕ್ತರು ಹೇಳುತ್ತಾರೆ. ಅಲ್ಲಿ ಒಂದು ಕಲ್ಲಿನಲ್ಲಿ ಸ್ವಯಂಭೂ ಆಗಿ ಮೂಡಿರುವ ಲಿಂಗಾಕಾರಕ್ಕೆ ಪ್ರತಿ ಮಹಾಶಿವರಾತ್ರಿಯ ದಿವಸ ಅವರ ವಂಶಜರೂ ಭಕ್ತ ಜನರೂ ಅಭಿಷೇಕ ಮಾಡುತ್ತಾರೆ. ಈ ರೀತಿಯಾಗಿ ತುಂಗಭದ್ರೆಯ ಪ್ರವಾಹದಗುಂಟ ಪಂಪಾಕ್ಷೇತ್ರಕ್ಕೆ ಹೋಗಿ ಶ್ರೀ ವಿರೂಪಾಕ್ಷೇಶ್ವರನ ದೇವಸ್ಥಾನದಲ್ಲಿ ಎಲ್ಲ ಭಕ್ತಜನರು ನೋಡುತ್ತಿರುವಂತೆ ಪೂರ್ವದಿಕ್ಕಿನ ದ್ವಾರದಿಂದಲೆ ಅಂತರ್ದೇಗುಲವನ್ನು ಪ್ರವೇಶಿಸಿ, ಅಲ್ಲಿಯೇ ಭಾದ್ರಪದ ಶುದ್ಧ ಬಿದಿಗೆಯ ದಿನ ಅಂತರ್ಧಾನರಾದರು.

ಲೋಕಾಭಿರಾಮವಾಗಿ ಶ್ರೀ ಬಿಷ್ಟೇಶರು ಅಪ್ಪಯ್ಯ ಜೋಯಿಸರ ಹೊಟ್ಟೆಯಲ್ಲಿ ಹುಟ್ಟಿದವರೆಂದಾದರೂ ಶ್ರೀ ವಿರುಪಾಕ್ಷೇಶ್ವರನು ಯೋನಿಜನು ಆಗದೇ ಬಾಲರೂಪಧಾರಿಯಾಗಿ ಸಶರೀರದಿಂದ ಭೂಮಿಗೆ ಇಳಿದು ಬಂದಂತೆ ಕೆಲವು ಕಾಲ ತನ್ನ ಲೀಲೆಯನ್ನು ತೋರಿಸಿ ಭಕ್ತರನ್ನು ಉದ್ಧರಿಸಿ ಕೊನೆಗೆ ಸಶರೀರದಿಂದಲೇ ತನ್ನ ಸ್ಥಾನದಲ್ಲಿ ಅದೃಶ್ಯನಾದನು.

ಕಾರ್ತೀಕ ಕೃಷ್ಣ ಅಮಾವಾಸ್ಯೆಯ ದಿವಸ ಶ್ರೀ ಶಿವಪ್ಪಯ್ಯನವರ ಆರಾಧನೆಯು ಮಾಡಲ್ಪಡುತ್ತಿರುವಂತೆ ಪ್ರತಿವರ್ಷ ಭಾದ್ರಪದ ಶುದ್ಧ ಬಿದಿಗೆಯ ದಿನ ಶ್ರೀ ಬಿಷ್ಟಪ್ಪಯ್ಯನವರ ಆರಾಧನೆಯನ್ನು ವಿಠ್ಠಲಾಪುರದಲ್ಲಿ ಮಾಡುತ್ತಾರೆ. ಈ ಆರಾಧನೆಯು ಭಕ್ತಜನರಲ್ಲಿ **"ಬಿದಿಗೆ ಆರಾಧನೆ"** ಎಂದು ತಿಳಿಯಲ್ಪಡುತ್ತದೆ. ಛಟ್ಟಿ (ಕಾ. ಕೃ. ೩೦) ಆರಾಧನೆಗೆ ಭಕ್ತಜನರು ಬಹು ಸಂಖ್ಯೆಯಲ್ಲಿ ನೆರೆಯುತ್ತಿರುವಂತೆ ಈ ಬಿದಿಗೆಯ ಆರಾಧನೆಗೂ ಭಕ್ತ ಜನರು ಬಹುಸಂಖ್ಯೆಯಲ್ಲಿ ನೆರೆಯುತ್ತಾರೆ. ಸುಮಾರು ಎರಡು-ಎರಡೂವರೆ ಶತಮಾನದಿಂದಲೂ ಅವರ ವಂಶಜರಿಂದ ಈ ಎರಡೂ ಆರಾಧನೆ ಮಾಡಲ್ಪಡುತ್ತವೆ. ಇಷ್ಟು

# ಪ್ರಕರಣ ೧೫

# ಅವತಾರ ಸಮಾಪ್ತಿ

ಕೆಲವು ದಿವಸಗಳ ನಂತರ ಬಿಷ್ಟಪ್ಪಯ್ಯನವರು ತಮ್ಮ ಮೊಮ್ಮಗನಾದ ಮಹಾದೇವಪ್ಪಯ್ಯನ ಉಪನಯನವನ್ನು ನೆರವೇರಿಸಿದರು. ಹೃತ್ಪೂರ್ವಕ ಅಂತಃಕರಣದಿಂದ ಆತನ ತಲೆಯ ಮೇಲೆ ತಮ್ಮ ವರದಹಸ್ತವನ್ನಿಟ್ಟು ಕಿವಿಯಲ್ಲಿ ಮಂತ್ರೋಪದೇಶವನ್ನು ಮಾಡಿದರು. ಆಮೇಲೆ ಸೊಸೆಯಾದ ತ್ರಿವೇಣ್ಯಮ್ಮನನ್ನು ಹತ್ತರ ಕರೆದು "ಸಾಧ್ವಿಯೇ ಅಂಜಬೇಡ, ನಿನಗೆ ಶ್ರೀ ವಿರುಪಾಕ್ಷೇಶನು ದಯತೋರುವನು ನಿನ್ನ ಮಗನನ್ನು ಜೋಪಾನ ಮಾಡಿ ನನ್ನ ವಂಶವನ್ನು ಭೂಷಣಗೊಳಿಸು. ನಾನಿನ್ನು ಹೋಗುವೆನು" ಎಂದು ಸೊಸೆಗೆ ಧೈರ್ಯ ಹೇಳಿ ತಾವು ಚ್ಯವನಾಶ್ರಮಕ್ಕೆ ಪ್ರಯಾಣಮಾಡಿದರು. ಅಲ್ಲಿ ಶಂಕರನೇ ಯೋಗಿ ಗುರು) ಎಂದು ಭಾವಿಸಿ, ಆತನಿಂದಲೇ ಚತುರ್ಥ ಅಶ್ರಮ (ಸಂನ್ಯಾಸ)ದ ದೀಕ್ಷೆಯನ್ನು ಪಡೆದುಕೊಂಡವರಾಗಿ ಅಲ್ಲಿಯೇ ಒಂದು ಶಿವಲಿಂಗವನ್ನು ಸ್ಥಾಪಿಸಿ. ಧ್ಯಾನಮಗ್ನರಾಗಿ ಇರುತ್ತಿದರು ಈ ಚ್ಯವನಾಶ್ರಮವು ವಿಠ್ಠಲಪುರದ ಪಶ್ಚಿಮಕ್ಕೆ ನದೀ ಮಧ್ಯದಲ್ಲಿ ನಡುಗಡ್ಡೆಯಲ್ಲಿ ಇತ್ತೆಂದು ತುಂಗಭದ್ರಾ ಮಹಾತ್ಮ್ಯೆಯಲ್ಲಿ ಉಲ್ಲೇಖವಿರುತ್ತದೆ. ಅಲ್ಲದೇ ಅಲ್ಲಿ ಸುತ್ತುಮುತ್ತಲಿನ ಜನರಾದರೂ ಇಂದಿಗೂ ಈ ಮಾತನ್ನೇ ಹೇಳುತ್ತಾರೆ. ಅಲ್ಲಿ ಒಂದು ಬಿಲ್ವವೃಕ್ಷದ ಬುಡದಲ್ಲಿ ಇರುವ ಶಿವಲಿಂಗವೇ ಶ್ರೀ ಬಿಷ್ಟಪ್ಪಯ್ಯನವರು ಸ್ಥಾಪಿಸಿದ್ದು. ಇದರ ಸಮೀಪದಲ್ಲಿ ಇರುವ ಒಂದು ಕಟ್ಟೆಯು ಅವರು ತಪಸ್ಸು ಮಾಡಿದ ಸ್ಥಳವೆಂತಲೂ ಜನರು ಹೇಳುತ್ತಾರೆ. ಮತ್ತು ಮೇವುಂಡಿಯಲ್ಲಿ ಇರುತ್ತಿರುವ ಶ್ರೀ ಬಿಷ್ಟಪ್ಪಯ್ಯನವರ ವಂಶಸ್ಥರಾದ ಬಿಷ್ಟಪ್ಪಯ್ಯನವರು ಶಿವರಾತ್ರಿ, ಪುಣ್ಯಕಾಲ, ಪರ್ವಕಾಲಗಳಲ್ಲಿ ಇಲ್ಲಿಗೆ ಬಂದು ಅಭಿಷೇಕ, ನೈವೇದ್ಯ, ಬ್ರಾಹ್ಮಣ ಭೋಜನಾದಿಗಳನ್ನು ಮಾಡಿಸುತ್ತಾರೆ ಈ ಚ್ಯವನಾಶ್ರಮವು ಈಗ ಶ್ರೀ ಶಂಕರಲಿಂಗನ ಗಡ್ಡಿ ಎಂದು ಗುರ್ತಿಸಲ್ಪಡುತ್ತದೆ.

ಈ ಚ್ಯವನಾಶ್ರಮದಲ್ಲಿ ಶ್ರೀ ಬಿಷ್ಟಪ್ಪಯ್ಯನವರು ಕೆಲವು ಕಾಲ ಕಳೆದ ನಂತರ ವೇಣುಪಲ್ಲಿಯ ಹತ್ತಿರ ನದಿಯ ಮಧ್ಯದಲ್ಲಿ ಇರುವ ಶಿವತೀರ್ಥಕ್ಕೆ ಹೋಗಿ ಅಲ್ಲಿ ಜಂಬುಕೇಶ್ವರನ ಸಾನ್ನಿಧ್ಯದಲ್ಲಿ ಒಂದು ತಿಂಗಳು ಅನುಷ್ಠಾನವನ್ನು ಮಾಡಿ ಅಲ್ಲಿಯೇ ಸಮೀಪದಲ್ಲಿರುವ ಬಂಡೆಗಲ್ಲುಗಳ ಸಾಲಿನಲ್ಲಿ "ದುರ್ಗದ ಕಲ್ಲು" ಎಂದು ಈಗ ಸಂಬೋಧಿಸಲ್ಪಡುತ್ತಿರುವ ಕಲ್ಲಿನ ಬಳಿಯಲ್ಲಿ ನೀರಿನ ಮೇಲೆ ಪದ್ಮಾಸನವನ್ನು ಹಾಕಿ ಕುಳಿತು ಹಾಗೆಯೇ ಪಂಪಾಕ್ಷೇತ್ರಕ್ಕೆ ಹೋದರೆಂದು ಭಕ್ತರು ಹೇಳುತ್ತಾರೆ. ಅಲ್ಲಿ ಒಂದು ಕಲ್ಲಿನಲ್ಲಿ ಸ್ವಯಂಭೂ ಆಗಿ ಮೂಡಿರುವ ಲಿಂಗಾಕಾರಕ್ಕೆ ಪ್ರತಿ ಮಹಾಶಿವರಾತ್ರಿಯ ದಿವಸ ಅವರ ವಂಶಜರೂ ಭಕ್ತ ಜನರೂ ಅಭಿಷೇಕ ಮಾಡುತ್ತಾರೆ. ಈ ರೀತಿಯಾಗಿ ತುಂಗಭದ್ರೆಯ ಪ್ರವಾಹದಗುಂಟ ಪಂಪಾಕ್ಷೇತ್ರಕ್ಕೆ ಹೋಗಿ ಶ್ರೀ ವಿರೂಪಾಕ್ಷೇಶ್ವರನ ದೇವಸ್ಥಾನದಲ್ಲಿ ಎಲ್ಲ ಭಕ್ತ ಜನರು ನೋಡುತ್ತಿರುವಂತೆ ಪೂರ್ವದಿಕ್ಕಿನ ದ್ವಾರದಿಂದಲೆ ಅಂತರ್ದೇಗುಲವನ್ನು ಪ್ರವೇಶಿಸಿ, ಅಲ್ಲಿಯೇ ಭಾದ್ರಪದ ಶುದ್ಧ ಬಿದಿಗೆಯ ದಿನ ಅಂತರ್ಧಾನರಾದರು.

ಲೋಕಾಭಿರಾಮವಾಗಿ ಶ್ರೀ ಬಿಷ್ಟೇಶರು ಅಪ್ಪಯ್ಯ ಜೋಯಿಸರ ಹೊಟ್ಟೆಯಲ್ಲಿ ಹುಟ್ಟಿದವರೆಂದಾದರೂ ಶ್ರೀ ವಿರುಪಾಕ್ಷೇಶ್ವರನು ಯೋನಿಜನು ಆಗದೇ ಬಾಲರೂಪಧಾರಿಯಾಗಿ ಸಶರೀರದಿಂದ ಭೂಮಿಗೆ ಇಳಿದು ಬಂದಂತೆ ಕೆಲವು ಕಾಲ ತನ್ನ ಲೀಲೆಯನ್ನು ತೋರಿಸಿ ಭಕ್ತರನ್ನು ಉದ್ಧರಿಸಿ ಕೊನೆಗೆ ಸಶರೀರದಿಂದಲೇ ತನ್ನ ಸ್ಥಾನದಲ್ಲಿ ಅದೃಶ್ಯನಾದನು.

ಕಾರ್ತೀಕ ಕೃಷ್ಣ ಅಮಾವಾಸ್ಯೆಯ ದಿವಸ ಶ್ರೀ ಶಿವಪ್ಪಯ್ಯನವರ ಆರಾಧನೆಯು ಮಾಡಲ್ಪಡುತ್ತಿರುವಂತೆ ಪ್ರತಿವರ್ಷ ಭಾದ್ರಪದ ಶುದ್ಧ ಬಿದಿಗೆಯ ದಿನ ಶ್ರೀ ಬಿಷ್ಟಪ್ಪಯ್ಯನವರ ಆರಾಧನೆಯನ್ನು ವಿಠ್ಠಲಾಪುರದಲ್ಲಿ ಮಾಡುತ್ತಾರೆ. ಈ ಆರಾಧನೆಯು ಭಕ್ತ ಜನರಲ್ಲಿ "**ಬಿದಿಗೆ ಆರಾಧನೆ**" ಎಂದು ತಿಳಿಯಲ್ಪಡುತ್ತದೆ. ಛಟ್ಟಿ (ಕಾ. ಕೃ. ೩೦) ಆರಾಧನೆಗೆ ಭಕ್ತಜನರು ಬಹು ಸಂಖ್ಯೆಯಲ್ಲಿ ನೆರೆಯುತ್ತಿರುವಂತೆ ಈ ಬಿದಿಗೆಯ ಆರಾಧನೆಗೂ ಭಕ್ತ ಜನರು ಬಹುಸಂಖ್ಯೆಯಲ್ಲಿ ನೆರೆಯುತ್ತಾರೆ. ಸುಮಾರು ಎರಡು-ಎರಡೂವರೆ ಶತಮಾನದಿಂದಲೂ ಅವರ ವಂಶಜರಿಂದ ಈ ಎರಡೂ ಆರಾಧನೆ ಮಾಡಲ್ಪಡುತ್ತವೆ. ಇಷ್ಟೆ

ದೀರ್ಘ ಕಾಲಾವಧಿಯ ವರೆಗೂ ತಪ್ಪದೇ ವಂಶಪರಾಗತವಾಗಿ ಈ ಆರಾಧನೆಗಳು ನಡೆದು ಬಂದದ್ದು ಆ ಮಹಾಮಹಿಮರ ಶ್ರೇಷ್ಠತೆಯ ದ್ಯೋತಕವಾಗಿದೆ.

ಶ್ರೀ ಮಹಾದೇವಪ್ಪಯ್ಯನವರು ತಮ್ಮ ಪಿತಾಮಹ ( ಅಜ್ಜ ) ರಿಂದ ಉಪನಯನವನ್ನೂ ಉಪದೇಶವನ್ನೂ ಪಡೆದುಕೊಂಡನಂತರ ವೇದಾಧ್ಯಯನಕ್ಕೆ ಪ್ರಾರಂಭಮಾಡಿದರು. ಸ್ವಲ್ಪ ಶ್ರವಣಮಾತ್ರದಿಂದ ವೇದಾಧ್ಯಯನವನ್ನು ಕೇವಲ ಎರಡುವರ್ಷಗಳಲ್ಲಿ ಮುಗಿಸಿದರು ನಂತರ ಆ ಬಾಲಕ ಶಿವಯೋಗಿಯು ತನ್ನ ಪಿತಾಮಹನ ಇಚ್ಛೆಯಂತೆ ಶಿವಾನುಷ್ಠಾನಕ್ಕೆ ಪ್ರಾರಂಭಮಾಡಿದರು. ತಾಯಿಯಾದ ತ್ರಿವೇಣ್ಯಮ್ಮನವರು ಮಗನ ಈ ರೀತಿಯನ್ನು ಕಂಡವರಾಗಿ ಮನಸ್ಸಿನಲ್ಲಿಯೇ ಆನಂದಭರಿತರಾದರು. ಮಾವನವರ ಕೃಪಾಶೀರ್ವಾದ ಬಲದಿಂದ ಮಗನು ಮಹಾಯೋಗಿ ಆಗುವಲ್ಲಿ ಸಂಶಯವಿಲ್ಲ ಅಂದುಕೊಂಡರು. ಆ ಬಾಲಯೋಗಿಯು ಕೆಲವು ಅನುಷ್ಠಾನದಲ್ಲಿ ಕಳೆದ ನಂತರ ಒಂದು ದಿವಸ ಮಾತೆಯ ಹತ್ತಿರ ಬಂದು ನಮಸ್ಕರಿಸಿ, ಅವರೊಡನೆ ತನ್ನ ಪಿತಾಮಹರ ಮನೋರಥವನ್ನು ಪೂರೈಸುವದಕ್ಕಾಗಿ ಗೋಪುರಕ್ಕೆ ಕಳಸವನ್ನು ಸ್ಥಾಪಿಸುವ ಕಾರ್ಯದ ಬಗ್ಗೆ ತಾಯಿಯೊಡನೆ ಆಲೋಚಿಸಿದರು. "ಪಿತಾಮಹರ ಇಚ್ಛೆಯಂತೆ ಗೋಪುರಕ್ಕೆ ಕಳಸವನ್ನು ಸ್ಥಾಪಿಸುವದೂ, ಲಕ್ಷಜನ ಬ್ರಾಹ್ಮಣರ ಪೂಜೆ, ಅನ್ನಸಂತರ್ಪಣೆ ಮಾಡಿಸುವದು ಶ್ರೀ ವಿರುಪಾಕ್ಷೇಶನಿಗೆ ಪ್ರಿಯವಾದದ್ದೂ ನಮ್ಮ ವಂಶಕ್ಕೆ ಭೂಷಣವೂ ಆಗಿದೆ. ಅದನ್ನು ಮಾಡಲಿಕ್ಕೆ ನಿನ್ನ ಮತವೇನಿದೆ ಹೇಳು, ನಿನ್ನ ಮತದಂತೆ ನಾನು ವರ್ತಿಸುವೆನು" ಮಗನ ಈ ಧರ್ಮವಿಚಾರವನ್ನು ಕೇಳಿ, ತ್ರಿವೇಣ್ಯಮ್ಮನವರು ಸಂತುಷ್ಟರಾದರು. "ಮಗು, ನಿನ್ನ ಅಜ್ಜಂದಿರ ಅನುಗ್ರಹದ ಮಹಿಮೆಯನ್ನು ನೀನು ಬಲ್ಲವನಾಗಿ ಇರುವೆ. ಹೆಣ್ಣುಮಗಳಾದ ನಾನು ಏನು ಮಾಡಬಲ್ಲೆ? ನಿನಗೆ ವಿರುಪಾಕ್ಷೇಶನ ಕೃಪೆ ಮತ್ತು ಹಿರಿಯರ ಆಶೀರ್ವಾದದ ಬಲವಿದೆ. ನಿನಗೆ ಧೈರ್ಯವಿದ್ದರೆ ಹಾಗೇ ಮಾಡು." ಎಂದು ಹೇಳಿದರು. ಕೂಡಲೇ ಮಹಾದೇವಪ್ಪಯ್ಯನು ತಾಯೀ, ಈ ನಿನ್ನ ವಚನವೇ ಶ್ರೀ ವಿರುಪಾಕ್ಷೇಶನ ವಚನವು. ಬಿಷ್ಟೇಶ ಗುರುಗಳ ಅನುಗ್ರಹವಂತೂ ನಿನ್ನ ಮೇಲೆ ನನ್ನ ಮೇಲೆ ಮತ್ತು ನವ ವಂಶದ ಮೇಲೆ ಇದ್ದೇ ಇರುತ್ತದೆ. ನಾವಿಬ್ಬರೂ ಪಂಪಾಪುರಿಗೆ ಹೋಗೋಣ" ಎಂದು ನಾಲ್ವರು ಬ್ರಾಹ್ಮಣರನ್ನು ಸಂಗಡ ಕರಕೊಂಡು ಪಂಪಾಕ್ಷೇತ್ರಕ್ಕೆ ಸಾಗಿದರು.

ಅಲ್ಲಿ ಹೋಗಿ ಪ್ರತ್ಯಕ್ಷ ಗೋಪುರವನ್ನು ನಿರೀಕ್ಷಿಸಿ, "ಅಯ್ಯೋ! ಪೂರ್ವಜರು ಅತಿ ಪ್ರಯಾಸದಿಂದ ಮಾಡಿದ ಕಾರ್ಯವು ನಾಶದ ಪಥವನ್ನು ಹಿಡಿದಿದೆಯಲ್ಲ. ಆಗಲಿ, " ಅವರ ಕೃಪೆಯಿಂದಲೇ ನನ್ನಿಂದ ಈ ಕಾರ್ಯವು ಪೂರ್ತಿಗೊಳ್ಳಬೇಕು" ಎಂದು ಮನಸ್ಸಿನಲ್ಲಿ ಅಂದುಕೊಂಡು ಆಗಲೇ ಶ್ರೀ ವಿರೂಪಾಕ್ಷನ ದೇವಾಲಯವನ್ನು ಹೊಕ್ಕು ಸತತವಾಗಿ ನಾಲ್ಕುದಿವಸ ಶ್ರೀ ವಿರುಪಾಕ್ಷೇಶನನ್ನು ಪ್ರಾರ್ಥಿಸಿದನು. ಆದರೂ ದೇವದರ್ಶನ ಆಗಲಿಲ್ಲ ಐದನೆಯ ದಿವಸ ತ್ರಿವೇಣ್ಯಮ್ಮನವರು ಮಗನನ್ನು ಹತ್ತರ ಕರೆದು : ಮಗು ನಾವಿಬ್ಬರೂ ಈ ಮಹಾಸ್ಥಾನಕ್ಕೆ ಬಂದು ಜನಾಪವಾದಕ್ಕೆ ಗುರಿಯಾದಂತೆ ಆಯಿತು. ನಮ್ಮಲ್ಲಿ ದ್ರವ್ಯಸಂಗ್ರಹ ಎಷ್ಟೆಷ್ಟೂ ಇಲ್ಲ. ಕಲಶಸ್ಥಾಪನೆಯ ದಿವಸ ಅಗಣಿತ ದ್ರವ್ಯವು ಬೇಕಾಗುವದು. ಬಾಲಕನಾದ ನಿನಗೆ ಅದು ಹೇಗೆ ಸಾಧ್ಯವಾಗಬೇಕು ಎಂದು ತಾಯಿಯು ಕಳವಳದಿಂದ ಆಡಿದ ಮಾತನ್ನು ಕೇಳಿ, ಮಹಾದೇವಪ್ಪಯ್ಯನು "ತಾಯೀ, ಚಿಂತಿಸಬೇಡ. ಎಲ್ಲವೂ ಶ್ರೀ ವಿರೂಪಾಕ್ಷೇಶನ ಇಚ್ಛೆಯು. ಆತನ ಕೃಪೆಯಾಗದೆ ನಾವು ಏನನ್ನೂ ಮಾಡ ಲಾರೆವು ಆತನಲ್ಲಿ ಬಾಲ-ವೃದ್ಧ ಭೇದ ಇಲ್ಲ. ಅದಕ್ಕಾಗಿ ನಾನು ಆತನ ಅಪ್ಪಣೆಪಡೆಯುತ್ತೇನೆ. ಆತನು ಕರುಣೆ ತೋರುವಲ್ಲಿ ಸಂದೇಹವಿಲ್ಲ. ನೀನು ಚಿಂತಿಸಬೇಡ" ಎಂದು ಹೇಳಿದವನಾಗಿ ಪುನಃ ಗರ್ಭಾಗಾರವನ್ನು ಹೊಕ್ಕನು. ಮತ್ತು ಪುನಃ ಈಶಸ್ತವನವನ್ನು ಮಾಡಲು ಪ್ರಾರಂಭಿಸಿದನು. "ದೇವೇಶನೇ ಪಿತಾಮಹನಿಂದ ನಿನ್ನ ಆಜ್ಞೆಯಂತೆ ನಿರ್ಮಿತವಾದ ಈ ಗೋಪುರವು ನನ್ನಿಂದ ಪೂರ್ತಿಯಾಗಬೇಕೆಂದು ನನ್ನ ಪಿತಾಮಹರ ಇಚ್ಛೆ ಇತ್ತು. ಮತ್ತು ಆ ಕಾರ್ಯ ವಾದರೂ ನಿನ್ನದೇ ಆಗಿದೆ. ಆದ್ದರಿಂದ ಅವರ ಇಚ್ಛೆಯಂತೆ ಈ ಮಹಾಕಾರ್ಯ ನನ್ನಿಂದಲೇ ಪೂರ್ತಿಯಾಗುವಂತೆ ಕರುಣಿಸು. ದ್ರವ್ಯಾಭಾವ, ಸಾಮಾನುಗಳ ಕೊರತೆ, ಜನಬಲರಹಿತನಾದ ನಾನು ನಿನ್ನ ಕರುಣೆಯಿಲ್ಲದೇ ಏನು ಮಾಡಬಲ್ಲೆ" ಎಂದು ಬಹುಪರಿಯಿಂದ ಪ್ರಾರ್ಥಿಸಲು ದೇವೇಶನು ಪ್ರಸನ್ನನಾಗಿ, ದರ್ಶನ ಕೊಟ್ಟು " ಮಗು ಚಿಂತಿಸಬೇಡ ಉತ್ತರದ್ವಾರದ ಹೊರಗೆ ನನ್ನ ಎದುರಿಗೆ ಇರುವ ಜಲಸಂಚಯದ ಸನ್ನಿಧಿಯಲ್ಲಿ ಇರುವ ತೀರ್ಥದ ಕೆಳಭಾಗ ದಲ್ಲಿ ಒಂದು ವಿಶಾಲವಾದ ಶಾಲೆಯನ್ನು ಕಾಣುವಿ ಅಲ್ಲಿ ನಿನಗೆ ಈಪ್ಸಿತ ವಾಗಿದ್ದ ಎಲ್ಲ ಸಾಧನಗಳೂ ದ್ರವ್ಯವೂ ಕಲಶವೂ ಇರುವವು. ಅವುಗಳನ್ನು

ನೀನು ತೆಗದುಕೋ ! ಮತ್ತು ನಿನ್ನ ಕಾರ್ಯವನ್ನು ಪ್ರಾರಂಭಿಸು." ಹೀಗೆ ಹೇಳಿ ದೇವಾಧಿದೇವನು ಅದೃಶ್ಯನಾದನು. ಕೂಡಲೇ ಮಹಾದೇವಪ್ಪಯ್ಯನು ನಾಲ್ಕು ಜನ ಬ್ರಾಹ್ಮಣರನ್ನು ಕರೆದುಕೊಂಡು ಆ ತೀರ್ಥದಲ್ಲಿ ಪ್ರವೇಶಿಸಿ ಅದರ ಕೆಳಭಾಗಕ್ಕೆ ಸೇರಲು ಅಲ್ಲಿ ಒಂದು ವಿಶಾಲವಾದ ಶಾಲೆಯನ್ನು ಕಂಡರು ಅಲ್ಲಿ ಪ್ರವೇಶಿಸಿ, ನೋಡಲು ಶ್ರೀ ವಿರುಪಾಕ್ಷೇಶನು ವಚನವನ್ನು ನುಡಿದಂತೆ ಅಲ್ಲಿ ವಿಪುಲವಾದ ಧನರಾಶಿಯೂ ಬೆಲೆಯುಳ್ಳ ಪಾತ್ರೆಗಳೂ ಕಲಶವು ಇದ್ದುದ್ದನ್ನು ಎಲ್ಲರೂ ನೋಡಿದರು. ಆಗ ಎಲ್ಲರೂ ವಿಸ್ಮಯಗೊಂಡು ಪರಮಾತ್ಮನ ಲೀಲೆಯು ಅಗಾಧವಾದದ್ದು ಎಂದು ಅಂದುಕೊಂಡರು. ಮಹಾದೇವಪ್ಪಯ್ಯನು ತನ್ನ ಸಂಗಡ ಬಂದ ಬ್ರಾಹ್ಮಣರಿಗೆ "ನನ್ನ ಅನುವರ್ತಿಗಳಾದ ಬ್ರಾಹ್ಮಣೋತ್ತಮರೇ ಈ ಎಲ್ಲ ದ್ರವ್ಯರಾಶಿಯನ್ನೂ ಪಾತ್ರೆ ಸಾಮಗ್ರಿಗಳನ್ನೂ ತಕ್ಕೊಂಡು, ನನ್ನ ತಾಯಿಯು ಬಾಲಕನಾದ ನನ್ನನ್ನು ಕಾಣುವ ಒಳಗಾಗಿಯೆ ನೀವು ಅಲ್ಲಿಗೆ ತೆಗೆದುಕೊಂಡು ಹೋಗಿ ತಾಯಿಗೆ ಒಪ್ಪಿಸಿರಿ" ಎಂದು ಹೇಳಿದನು. ಆಗ ಆ ಬ್ರಾಹ್ಮಣರು ಆ ತೀರ್ಥದಲ್ಲಿ ಪುನಃ ಪುನಃ ಮುಳುಗಿ ಮಿಂದು ಆ ಎಲ್ಲ ಧನ, ಪಾತ್ರೆ, ಕಲಶಗಳನ್ನು ಹೊತ್ತುಕೊಂಡು ಪೂಜ್ಯಳಾದ ತ್ರಿವೇಣ್ಯಮ್ಮನ ಬಳಿಗೆ ತಂದರು. ಇದೆಲ್ಲವನ್ನು ನೋಡಿ ತ್ರಿವೇಣ್ಯಮ್ಮನು ವಿರುಪಾಕ್ಷೇಶನ ಕೃಪೆ ಮತ್ತು ಬಾಲಕನ ಯೋಗ್ಯತೆಯನ್ನೂ ಕಂಡು ವಿಸ್ಮಯಾನಂದಭರಿತಳಾದಳು. ಅಷ್ಟರಲ್ಲಿ ಮಹಾದೇವಪ್ಪಯ್ಯನೂ ಅಲ್ಲಿಗೆ ಬಂದು ತಾಯಿಯ ಚರಣಗಳಿಗೆ ಎರಗಿದನು. "ಜಗದ್ವಿಖ್ಯಾತನಾಗು'' ಎಂದು ಆಶೀರ್ವದಿಸಿದಳು.

ಮರುದಿವಸವೇ ಗೋಪುರದ ಸಮ್ಮುಖದಲ್ಲಿ ಬೆಳ್ಳಿಯ ಪಂಚಕಲಶಗಳನ್ನು ಸ್ಥಾಪಿಸಿ ಶಾಸ್ತ್ರೋಕ್ತವಾಗಿ ಕಾರ್ಯ್ಯಕ್ಕಾರಂಭಮಾಡಿದರು. ಲಕ್ಷ ಬ್ರಾಹ್ಮಣ ಪೂಜೆ ಮತ್ತು ಅನ್ನಸಂತರ್ಪಣೆಯು ಸಿದ್ಧತೆ ಪ್ರಾರಂಭವಾಯಿತು. ಪ್ರತಿನಿತ್ಯ ಬ್ರಾಹ್ಮಣ ಭೋಜನವು ಯಥಾಸಾಂಗವಾಗಿ ನಡೆಯುಹತ್ತಿತು. ಸಾವಿರದ ಎಣಿಕೆಯಲ್ಲಿ ಬ್ರಹ್ಮವೃಂದವು ಸೇರಿತು. ಹೀಗೆ ನಿತ್ಯ ನಡೆದಿರಲು ಒಂದು ದಿವಸ ಪಾಕಾರಂಭದಲ್ಲಿ "ಇಂದು ಅಡುಗೆಗೆ ಬೆಲ್ಲವಿಲ್ಲ'' ಎಂದು ಪಾಕ ಕರ್ತರು ಹೇಳಲು ಮಹಾದೇವಪ್ಪಯ್ಯನವರು ಪರಿಚಾರಕರನ್ನು ಕರೆದು ತುಂಗಭದ್ರೆಯ ದಡದಲ್ಲಿ ಇರುವ ಸಕ್ಕರೆಯನ್ನು (ಉಸುಕನ್ನು) ಬುಟ್ಟಿಗಳಲ್ಲಿ ತುಂಬಿಕೊಂಡು ಬನ್ನಿರಿ" ಎಂದು ಆಜ್ಞಾಪಿಸಿದರು ಕೂಡಲೇ ಸೇವಕರು

ತುಂಗಭದ್ರೆಯು ದಂಡೆಯು ಮಣ್ಣನ್ನು ತಂದು ಪಾಕಶಾಲೆಯಲ್ಲಿ ಒಟ್ಟಿದರು ಆಗ ಮಂತ್ರಜಲವನ್ನು ಮಹಾದೇವಪ್ಪಯ್ಯನವರು ಪ್ರೋಕ್ಷಿಸಲು ಅದೆಲ್ಲವೂ ಬೆಲ್ಲವಾಯಿತು. ಸದ್ಯಕ್ಕೆ ಈ ಬೆಲ್ಲದಿಂದ ಪಾಕವನ್ನು ಸಿದ್ಧಪಡಿಸಿರಿ. ಇನ್ನು ಒಂದೆರಡು ಕ್ಷಣಗಳಲ್ಲಿ ಹನುಮಂತನು ಶ್ರೀ ವಿರುಪಾಕ್ಷನಿಂದ ಪ್ರೇರಿತನಾಗಿರುವ ದರಿಂದ ಬೆಲ್ಲವನ್ನು ತರುತ್ತಾನೆ. ಅಲ್ಲಿಯು ವರೆಗೆ ಪಾಕಸಿದ್ಧಿಗೆ ಅಡ್ಡಿಮಾಡ ಬೇಡಿರಿ'' ಎಂದು ಹೇಳಿದರು. ಇದೆಲ್ಲವನ್ನೂ ಕೇಳಿ, ಮತ್ತು ಮಣ್ಣು ಬೆಲ್ಲ ವಾದದ್ದನ್ನು ಕಂಡು ಎಲ್ಲ ಜನರೂ ಆಶ್ಚರ್ಯಚಕಿತರಾದರು. ಮಹಾದೇವಪ್ಪಯ್ಯ ನವರ ಬಗ್ಗೆ ಎಲ್ಲರೂ ಭಯ,ಭಕ್ತಿ, ಆದರ ಪೂಜ್ಯಭಾವನೆಯುಳ್ಳವರಾದರು. ಅಷ್ಟರಲ್ಲಿಯೇ ನೂರಾರು ಜನ ಸೇವಕರು ಬೆಲ್ಲದ ಹೊರೆ ಹೊತ್ತುಕೊಂಡು ಬಂದರು. ಕೂಡಲೇ ಮಹಾದೇವಪ್ಪಯ್ಯನವರು ಸೇವಕರಿಗೆ "ಹನುಮಂತನ ಬೆಲ್ಲವನ್ನು ತಂದಿದ್ದಾನೆ ಮುಂಜಾಗ್ರತೆಯಿಂದ ಬೆಲ್ಲದ ಹೊರೆಯನ್ನು ಇಳಿಸಿಕೊಳ್ಳಿರಿ"ಎಂದು ಆಜ್ಞಾಪಿಸಿದರು.

ಇತಿ ಶ್ರೀ ಬಿಷ್ಣೇಶೋಪಾಖ್ಯಾನ ತೃತೀಯಸರ್ಗ ತ್ರಿತಿಂಶತಿ ಶ್ಲೋಕಾರ್ಥಸಮಾಪ್ತ.

ಇಲ್ಲಿಗೆ ಶ್ರೀ ಬಿಷ್ಣೇಶಾಖ್ಯಾನದಲ್ಲಿಯ ೩ನೇ ಸರ್ಗದಲ್ಲಿಯ

ಶ್ರೀ ಮಹಾದೇವಪ್ಪಯ್ಯನವರ ಜರಿತ್ರೆ

೩೩ ಶ್ಲೋಕ ಮತ್ತು ಕಥೆ ಸಮಾಪ್ತ



## ಪ್ರಕರಣ ೫

# ಶ್ರೀಮದಾದ್ಯ ಬಿಷ್ಟಪ್ಪಯ್ಯನವರ ಚರಿತ್ರೆ

### ಪದ್ಯರೂಪದಲ್ಲಿ

(ಶ್ರೀ ಬಿಷ್ಟೇಶರ ಮಹಿಮೆಯು ಭಕ್ತರಿಗೆ ಸದಾ ಸ್ಮೃತಿಯಲ್ಲಿ ಉಳಿಯಬೇಕೆಂದೂ ನಿತ್ಯ ಪಠಣಕ್ಕೆ ಅನುಕೂಲವಾಗಬೇಕೆಂದೂ ಅವರ ಚರಿತ್ರವನ್ನು ಪದ್ಯರೂಪದಲ್ಲಿ ರಚಿಸಿ ಇಲ್ಲಿ ಕೊಡಲಾಗಿದೆ.) —ಲೇಖಕರು.

ಯೋಗಿವರ್ಯ ಶ್ರೀ ಬಿಷ್ಟಪ್ಪಯ್ಯನವರ | ಮಹಿಮೆ ಸಾರಲು ಲೋಕದಲಿ |
ಶ್ರೀ ಗಣನಾಥನೆ ಮತಿಯನು ನೀಡೈ | ಬಾಗಿ ನಮಿಸುವೆ ಭಕ್ತಿಯಲಿ ||ಪ||

ಕುಂತಳ ಭಾಗದ ಸೋಗೀ ಗ್ರಾಮದಿ |
ಶ್ರೇಷ್ಠ ಜೋಯಿಸರ ವಂಶದಲಿ ||
ಇಂದುಧರನಾ ಭಕ್ತರಪ್ಪಯ್ಯರು |
ಖ್ಯಾತಿವಂತರು ವಿದ್ಯೆಯಲಿ ||೧||

ಕಾಲವ ಕಳೆದರು ಬಹು ದಿನ ವರೆಗೆ |
ಸಂತತಿ ಇಲ್ಲದ ಚಿಂತಿಯಲಿ ||
ನೀಲಕಂಠನಾ ಸ್ಮರಿಸುತ ನಿತ್ಯದಿ |
ವ್ರತವನು ಗೈದರು ನಿಷ್ಠೆಯಲಿ ||೨||

ಎಂಬತ್ತೈದರ ವೃದ್ಧರು ಅವರು |
ತಪವನು ಗೈದರು ಉಗ್ರದಲಿ ||
ಪಂಪಾಪತಿಯು ತಪಸಿಗೆ ಮೆಚ್ಚಿದ |
ದರುಶನ ನೀಡಿದ ಕರುಣದಲಿ ||೩||

ವಿರುಪಾಕ್ಷೇಶನು ಭಕ್ತ ಅಪ್ಪಯ್ಯಗೆ
ಮೆಚ್ಚಿದೆ ತಪಸಿಗೆ ಎನ್ನುತಲಿ |
ವರವನು ನೀಡುವೆ ಬೇಡು ಭಕುತನೆ |
ವಾಂಛಿತವೇನಿದೆ ಮನದಲ್ಲಿ ||೪||

ಚಂದ್ರಮೌಳಿಯು ಗಂಗಾಧರನು |
ವ್ಯಾಘ್ರಾಂಬರವಿಭೂಷಿತನು ||
ಪಂಚಮುಖದವ ನಾಗಭೂಷಣ |
ಭಾಲನೇತ್ರದ ಪರಶಿವನು ||೫||

ಇಂತಿಹ ರೂಪವ ಕಂಡನಪ್ಪಯ್ಯನು |
ಬೆರಗುಗೊಂಡು ತಾ ಮನದಲ್ಲಿ ||
ಸಂತಸದಿಂದಲಿ ಪಾದಕೆ ಎರಗಿ |
ವರವನು ಬೇಡಿದ ಭಕ್ತಿಯಲಿ ||೬||

ದೇವರ ದೇವನೆ ನಿನ್ನೀರೂಪವು |
ಸ್ಥಿರವಾಗಿರಲೀ ನೇತ್ರದಲಿ ||
ಪಾವನಚರಿತನೆ ನಿನ್ನಯ ಸ್ಮರಣೆಯು
ಮರೆಯದಾಗಲಿ ಮನದಲ್ಲಿ ||೭||

ನಿನ್ನಯ ಭಕ್ತರ ಸಂಗವು ಸೇವೆಯು
ತಪ್ಪದಾಗಲಿ ನಿತ್ಯದಲಿ ||
ಇನ್ನೇನೇನನು ಬೇಡುವದಿಲ್ಲವು |
ನೀಡು ವರವನು ಕರುಣದಲಿ ||೮||

ತಾಪಸವರ್ಯನೆ ತಪಸಿನ ಕಾರಣ |
ಮರೆತುಬಿಟ್ಟೆಯೋ ಮೋಹದಲಿ ||
ಪಾಪರಹಿತನೆ ಮನಸಿನ ದುಗುಡವ |
ಬಿಟ್ಟು ಹೇಳು ನಿಃಶಂಕೆಯಲಿ ||೯||

ಕಂತುಹರನ ವಚನಕೆ ಮುನಿಯು |
ಲಜ್ಜೆಗೊಂಡನು ಮನದಲ್ಲಿ ||
ಎಂತು ಹೇಳಲಿ ತಪಸಿನಕಾರಣ
ಎಂದು ಬೆಂದನು ಚಿಂತೆಯಲಿ ||೧೦||

ಎಂಬತ್ತೈದರ ವೃದ್ಧನು ನಾನು-
ಹೆಂಡತಿಗರವತ್ತೈದರಲಿ ||
ಶಾಂಭವಿನಾಥನೆ ಸಂತತಿದಾಯಕ |
ವರವನು ಬೇಡಲು ಸ್ಥಳವೆಲ್ಲಿ ||೧೧||

ನೀಡುವೆ ವರವನು ತಾಪಸವರ್ಯನೆ |
ಬಿಡು ಚಿಂತೆಯ ನೀ ಮನಸಿನಲಿ ||
ಖಂಡಿತವಾಗಿ ಪುತ್ರನು ಜನಿಸುವ |
ನಿನ್ನಯ ಪತ್ನಿಯ ಉದರದಲಿ ||೧೨||

ಜಗದೋದ್ಧಾರದ ಕಾರಣಕಾಗಿ |
ಅವತರಿಸುವೆ ನಾ ಭೂಮಿಯಲಿ ||
ಮಗುವಾಗುವೆನು ನಿನಗಾಗಿಯೇ ನಾ |
ಧರ್ಮೋದ್ಧಾರದ ನೆವದಲ್ಲಿ ||೧೩||

ನೀಡುವೆ ಫಲವನು ತವಸತಿಗರ್ಪಿಸು |
ಭಕ್ಷಿಸಲವಳು ಭಕ್ತಿಯಲಿ ||
ಮಾಡದಿರು ನೀ ಅಂಗಸ್ಪರ್ಶವ |
ಗರ್ಭವು ಬೆಳೆವುದು ಕ್ರಮದಲ್ಲಿ ||೧೪||

ನೀಡಿದ ಫಲವನು ಕೊಂಡನಪ್ಪಯ್ಯನು !
ನಡೆದನು ಗೃಹದೆಡೆ ತ್ವರಿತದಲಿ ||
ಮಡದಿಯ ಉಡಿಯಲಿ ಇಟ್ಟನು ಪ್ರೇಮದಿ|
ಅರುಹಿದನೆಲ್ಲವ ಭಕ್ತಿಯಲಿ || ೧೫ ||

ತುಂಬಿದ ಹೃದಯದಿ ಭಕ್ತಿಭಾವದಿ ।
ನಾಥನ ಚರಣಕೆ ನಮಿಸುತಲಿ ॥
ಶಂಭುವು ನೀಡಿದ ಫಲವನು ಸೇವಿಸಿ ।
ತೃಪ್ತಳಾದಳು ಚಿತ್ತದಲಿ ॥ ೧೬ ॥

ಗರ್ಭವು ದಿನದಿನ ಮಾಸಮಾಸಕೆ ।
ವೃದ್ಧಿಂಗತವು ಕ್ರಮದಲ್ಲಿ ॥
ಗರ್ಭವತಿಯ ರೀತಿಯ ಕಾಣುತ ।
ಅಚ್ಚರಿಗೊಂಡರು ಪುರದಲ್ಲಿ ॥ ೧೭ ॥

ದಶಮಾಸಗಳು ನಡೆದಿಹ ಕಾಲಕೆ ।
ಸತಿ ಪತಿ ಇರಲು ನಿದ್ರೆಯಲಿ ॥
ಪ್ರಸೂತಳಾದಳು ಆ ಮಹಾಸತಿಯು ।
ಇಳಿದನು ಪರಶಿವ ಭೂಮಿಯಲಿ ೧೮ ॥

ಪ್ರಸವ ವೇದನೆ ರಕ್ತ ಮಾಂಸಗಳ ।
ನೇನೂ ಕಾಣದೆ ಕುಕ್ಷಿಯಲಿ ॥
ಭಾಸ್ಕರ ತೇಜದಿ ಹೊಳೆಯುವ ಶಿಶುವನು ।
ಕಂಡರು ಪ್ರೇಮಾಶ್ಚರ್ಯದಲಿ ॥ ೧೯ ॥

ಅಿನಿಜನೋ ? ಇವಗರ್ಭಜನೋ ।
ಬ್ರಹ್ಮಾಂಡದಿ ತಾ ಬಂದವನೋ ? ॥
ಜ್ಞಾನಿಗಳಿಗೂ ತರ್ಕವಾಗದು ಸಾ ।
ಮಾನ್ಯರಿಗದು ತಿಳಿಯುವದೋ ॥ ೨೦ ॥

ವಿರುಪಾಕ್ಷೇಶನೆ ಶಿಶುವಿನ ರೂಪದಿ ।
ಬಂದಿರುವನು ಎಂದೆನ್ನುತಲಿ ॥
ಹರುಷದಿ ಶಿಶುವನು ಎತ್ತಿ ಮುದ್ದಾಡಿದ ।
ರಪ್ಪಿಕೊಂಡರು ಪ್ರೇಮದಲಿ ॥ ೨೧ ॥

ಇಷ್ಟಾರ್ಥವನು ಪೂರ್ತಿಗೊಳಿಸಲು |
ಹುಟ್ಟಿರುವದರ ಕಾರಣದಿ ||
ಬಿಷ್ಟೇಶನೆಂದು ನಾಮಕರಣವ |
ಮಾಡಿದರವಗೆ ಪ್ರೀತಿಯಲಿ || ೨೨ ||

ಬಿದಿಗೆಯ ಚಂದ್ರನ ತೆರದಿ ಬಿಷ್ಟೇಶನು |
ಬೆಳೆದನು ದಿನದಿನ ಕ್ರಮದಲ್ಲಿ ||
ಐದು ವರ್ಷಕೆ ವ್ರತಬಂಧವನು |
ಮಾಡಿದರಾಗಲೆ ನೇಮದಲಿ || ೨೩ ||

ವ್ರತಬಂಧನದಿ ಬದ್ಧ ಬಿಷ್ಟೇಶನು |
ಹೃದಯದಿ ಶಿವನ ಸ್ಥಿರಗೊಳಿಸಿ ||
ವ್ರತವನು ಹಿಡಿದನು ನಿತ್ಯನೇಮದಿ |
ಶಿವಧ್ಯಾನದಿ ದಿನ ಕಳೆಯುತಲಿ || || ೨೪ ||

ಬೇಸರಾಯಿತು ಗ್ರಾಮವಾಸವು |
ಜನಜಂಗುಳಿಯ ಗುಂಪಿನಲಿ ||
ಈಶಸ್ತವನಕೆ ವಿಘ್ನವಾಗಲು |
ನಡೆದನು ಕಾನನಪೆಡೆಯಲಿ || ೨೫ ||

ಕಾನನ ಮಧ್ಯದಿ ಸ್ಥಿರದಾಸನದಿ |
ಕುಳಿತುಕೊಳ್ವನು ಶುಚಿಯಲ್ಲಿ ||
ತನುಮನಗಳನು ನಿಗ್ರಹಿಸುತಲಿ |
ಧ್ಯಾನಮಗ್ನನು ನಿಷ್ಠೆಯಲಿ || ೨೬ ||

ಭೋಜನಕಾಗಿ ಸಮರಾತ್ರಿಯಲಿ |
ಬರುವನು ಗೃಹದೆಡೆ ನಿತ್ಯದಲಿ ||
ಭೋಜನವಾದಾ ಮರುಕ್ಷಣದಲ್ಲಿ |
ತೆರಳುವ ಕಾನನದೆಡೆಯಲ್ಲಿ || ೨೭ ||

ಇಂತೀ ರೀತಿಯು ಕಾರ್ಯಕ್ರಮವು ।
ನಡೆದಿರೆ ಬಹುದಿನ ನಿತ್ಯದಲಿ ಃ
ಭ್ರಾಂತರಾದರು ಪುರವಾಸಿಯರು ।
ಬಾಲಯೋಗಿಯ ವಿಷಯದಲಿ ॥ ೨೮ ॥

ಕೆಲವರು ಸ್ತುತಿಪರು ಹಳಿವರು ಕೆಲವರು ।
ಕಾಣ್ವರು ಕೆಲವರು ಶಂಕೆಯಲಿ ॥
ಬಾಲಯೋಗಿಯ ಪರಿಕಿಸಲೋಸುಗ ।
ಕೆಲವರು ಯೋಚನೆ ಮಾಡುತಲಿ ॥ ೨೯ ॥

ಸಾಧು ಪೀಡಕರು ಕಿರಾತ ಜನರು ।
ದುರ್ಗಮಿಗಳು ನಡತೆಯಲಿ ॥
ಸಿದ್ಧರಾದರು ಸಾಧುವರ್ಯನ ।
ಪೀಡಿಸಲೋಸುಗ ಯುಕ್ತಿಯಲಿ ॥ ೩೦ ॥

ನಿಶಿರಾತ್ರಿಯಲಿ ನಿತ್ಯದಂತೆಯೆ ।
ಬಂದ ಬಿಷ್ಟೇಶನು ಪುರದಲ್ಲಿ ॥
ಆ ಸಮಯಕೆ ದುಷ್ಟರು ಅಗಸೆಗೆ ।
ಕೀಲಿಯ ಜಡಿದರು ಭದ್ರದಲಿ ॥ ೩೧ ॥

ಬಂದ ಬಿಷ್ಟೇಶನು ತ್ವರಿತದಿಂದಲಿ ।
ಕಾನನದೆಡೆಗೆ ಸಾಗುತಲಿ ॥
ಕಂಡನು ದ್ವಾರವ ಭದ್ರವಾದುದನು ।
ಯೋಚಿಸಿ ಬಹುಪರಿ ಮನದಲ್ಲಿ ॥ ೩೨ ॥

ದ್ವಾರವ ಭೇದಿಸಿ ಹೊರಸಾಗಲು ತಾ ।
ದಾರಿಯ ಕಾಣದೆ ಚಿಂತೆಯಲಿ ॥
ಮಾರನಾಶನನ ಸ್ತೋತ್ರವ ಮಾಡಲು ।
ಪ್ರಾರಂಭಿಸಿದನು ದ್ವಾರದಲಿ ॥ ೩೩ ॥

ಭಾ. ಷ.|| ಇಂದುಧರನೇ ಪಾರು ಮಾಡೈ |
ಬಂದ ಸಂಕಟದಿಂದಲೆನ್ನನು |
ಮಂದಮತಿಗಳು ಮಾಡಿದಪಕೃತಿ ಎಂತು ಸೈರಿಸಲಿ ||
ಎಂದಿನಿಂದಲು ಧ್ಯಾನಮಗ್ನನಿ |
ಗಿಂದು ತಪ್ಪಿತು ನಿತ್ಯನೇಮವು |
ಚಂದ್ರಮೌಳಿಯೆ ನಿನ್ನ ಹೊರತಿನ್ನಾರು ಗತಿ ಎನಗೆ || ೩೪ ||

ಆರು ವರ್ಣದ ಮಂತ್ರಪ್ರಿಯನೆ |
ಆರು ಮುಖದನ ಪ್ರೀಯ ತಾತನೆ ||
ಆರು ಶಕ್ತಿಯ ಧಾರಿಯೇ ಪರಮಾತ್ಮನೇ ಪರಮೇಶ್ವರನೆ ||
ಆರು ಭುಜಗಳ ಧರಿಸಿದಾತನೆ |
ವೈರಿಗಳಿಗತಿ ತಾಪಕರನೇ |
ಗೌರಿನಾಥನೆ ರಕ್ಷಿಸೆನ್ನನು ಬಂದ ಸಂಕಟದಿ || ೩೫ ||

ಈಶಸ್ತವನವ ಮಾಡಿದ ಬಹುಪರಿ |
ವಟುವರನಾಗಲೆ ಭಕ್ತಿಯಲಿ ||
ಪ್ರಸನ್ನನಾದನು ಮಹಾದೇವನು ತಾ |
ಯೋಗಿಯ ಭಕ್ತಿಗೆ ಮೆಚ್ಚುತಲಿ || ೩೬ ||

ಸುವರ್ಣವರ್ಣದ ಪಾದುಕೆಗಳ ಮೇಣ್ |
ಬೆತ್ತವನೊಂದನು ನೀಡುತಲಿ ||
ಅವನಿಯ ಪಾವನಗೊಳಿಸೈ ಎನ್ನುತ |
ನೀಡಿದ ವರವನು ಕರುಣದಲಿ || ೩೭ ||

ಬೆತ್ತದಿ ದ್ವಾರಕೆ ಸ್ಪರ್ಶವ ಮಾಡಲು |
ದ್ವಾರವು ತೆರೆಯಿತು ಕ್ಷಣದಲ್ಲಿ ||
ಭಕ್ತವರ್ಯನು ಪಾದುಕೆ ಧರಿಸುತ |
ನಡೆದನು ಕಾನನದೆಡೆಯಲ್ಲಿ || ೩೮ ||

ಕಾನನ ಮಧ್ಯದಿ ನಿರ್ಜನ ಭಾಗದಿ ।
ವಟವೃಕ್ಷದ ಮಹಾ ಹೊದರಿನಲಿ ॥
ಧ್ಯಾನಮಗ್ನನು ಆಗಿ ಬಿಷ್ಟೇಶನು ।
ಕುಳಿತುಕೊಳ್ವನು ನಿತ್ಯದಲಿ ॥ ೩೯ ॥

ಏಕನಿಷ್ಠೆಯಿಂ ತಪವನು ಮಾಡಿದ ।
ದ್ವಾದಶ ವರ್ಷವು ಉಗ್ರದಲಿ ॥
ಲೋಕೋದ್ಧಾರದ ಕಾರಣಕ್ಕಾಗಿ ।
ಪುನರಪಿ ಮರಳಿದ ಗ್ರಾಮದಲಿ ॥ ೪೦ ॥

ಶಿವಮಂದಿರವನು ಸ್ಥಾಪಿಸಿದನು ತಾ ।
ತಿಂತ್ರಿಣಿ ವೃಕ್ಷದ ಅಡಿಯಲ್ಲಿ ॥
ಶಿವಾರ್ಚನೆಯನು ಮಾಡುತ ನಿತ್ಯದಿ ।
ಕಾಲವ ಕಳೆದನು ಸೌಖ್ಯದಲಿ ॥ ೪೧ ॥

ಧರ್ಮಪತ್ನಿಯು ಲಕ್ಷ್ಮೀದೇವಿಯು
ನಿರುತದಿ ದಕ್ಷಳು ಸೇವೆಯಲಿ ॥
ಧರ್ಮಕಾರ್ಯಕೆ ಸಾನುಕೂಲಳು ।
ಬಿಷ್ಟಪ್ಪಯ್ಯಗೆ ನಿತ್ಯದಲಿ ॥ ೪೨ ॥

ನಿತ್ಯದಿ ನಡೆದವು ವ್ರತನೇಮಗಳು ।
ಧರ್ಮದ ಕಟ್ಟಳೆಗನುಸರಿಸಿ ॥
ನಿತ್ಯ ಬ್ರಾಹ್ಮಣ ಭೋಜನ ನಡೆಯುವುದು ।
ಪ್ರತಿದಿನ ಸಂಖ್ಯೆಯು ಬೆಳೆಯುತಲಿ ॥ ೪೩ ॥

ಒಂದಿನ ಬ್ರಾಹ್ಮಣವೃಂದಕೆ ಕ್ಷೀರದ ।
ಇಚ್ಛೆಯಾದುದ ತಿಳಿಯುತಲಿ ॥
ತಿಂತ್ರಿಣಿ ವೃಕ್ಷಕೆ ನೇತ್ರಸ್ಪರ್ಶಿಸೆ ।
ಕ್ಷೀರವು ಹರಿಯಿತು ಧಾರೆಯಲಿ ॥ ೪೪ ॥

ಬಹುದಿನ ವರೆಗೆ ಗೃಹಸ್ಥ ಧರ್ಮದಿ ।
ನಡೆದರು ಸತಿಪತಿ ನೇಮದಲಿ ॥
ಮಹಾದೇವೇಶನ ಕರುಣೆಯಿಂದಲಿ ।
ಸಂತತಿ ಲಾಭವ ಪಡೆಯುತಲಿ ॥ ೪೫ ॥

ಮೂವರು ಕನ್ಯಾರತ್ನಗಳಾದವು ।
ನಂತರ ಪುತ್ರನು ಜನಿಸಿದನು ॥
ಶಿವನೆನ್ನುತಲಿ ನಾಮಕರಣವ ।
ಮಾಡಿದರವಗೆ ಹರುಷದಲಿ ॥ ೪೬ ॥

ಪುರವಾಸಿಗಳು ಬಿಷ್ಟಪ್ಪಯ್ಯರ ।
ನಿತ್ಯನೇಮವನು ಕಾಣುತಲಿ ॥
ಹರುಷಗೊಳ್ವರು ಸತ್ಯವಂತರು ।
ಸಾಧುಪ್ರೀಯರ ಮನದಲ್ಲಿ ॥ ೪೭ ॥

ದುಷ್ಟರ ಕಾಟವು ಸಾಧು ಜನರಿಗೆ
ತಪ್ಪದು ಎಂದೂ ಲೋಕದಲಿ ॥
ಬಿಷ್ಟಯೋಗಿಗೆ ಕಿರಾತ ಜನರು ।
ಕಾಡುತಲಿದ್ದರು ಸಮಯದಲಿ ॥ ೪೮ ॥

ಒಂದಿನ ಅವರು ಬಿಷ್ಟಪ್ಪಯ್ಯರ ।
ಕಟ್ಟಿಹಾಕಿದರು ಚೀಲದಲಿ ॥
ಬಂಧಿಸಿ ಚೀಲವ ಒಗೆದರು ಗ್ರಾಮದ ।
ಹಾಳು ಬಿದ್ದಿಹ ಬಾವಿಯಲಿ ॥ ೪೯ ॥

ಶಿವನಾಮವನು ಘೋಷಿಸತೊಡಗಿದ ।
ಬಿಷ್ಟಪ್ಪಯ್ಯನು ಬಾವಿಯಲಿ ॥
ಭವಸಾಗರವ ದಾಟುವಂದದಲಿ ।
ಬಂದನು ಮೇಲಕೆ ಲೀಲೆಯಲಿ ॥ ೫೦ ॥

ಜನಸಂಪರ್ಕವ ತ್ಯಜಿಸುವಲೋಸುಗ |
ಪುರಹೊರ ಸಾಗಿದ ತ್ವರಿತದಲಿ ||
ಹನಸಿ ಗ್ರಾಮಕೆ ಬಂದನು ಅಲ್ಲಿಯ |
ಅಧಿಕಾರಿಯನು ಕಾಣುತಲಿ || ೫೧ ||

ಧ್ಯಾನಕ್ಕಾಗಿಯೇ ತಾಣವನೊಂದನು |
ಬೇಡಿದನಾಶೀರ್ವದಿಸುತಲಿ ||
ಹನಸೀ ಗ್ರಾಮದ ಅಧಿಕಾರಿಯು ತಾ |
ಹೇಳಿದ ಚೇಷ್ಟೆಯ ಮಾತಿನಲಿ || ೫೨ ||

ಗಳಿಗೆಯನೊಂದನು ತೋರಿಸಿ ಯೋಗಿಗೆ |
ನಡೆಸೈ ತಪಸಿನ ಪುಣ್ಯದಲಿ ||
ಗಳಿಗೆಯು ನಡೆಯುವ ಸ್ಥಳವೆಲ್ಲವನು |
ನೀಡುವೆ ನಿನಗೆ ದಾನದಲಿ || ೫೩ ||

ಮೃತ್ತಿಕೆ ತುಂಬಿದ ಗಳಿಗೆಯ ನೋಡುತ |
ಯೋಗಿ ಈಶನ ಸ್ಮರಿಸುತಲಿ |
ಚಿತ್ತದಿ ಗಳಿಗೆಯ ಬಡಿಯಲು ಮುಂದಕೆ |
ಸಾಗಿತು ವಾಯುವೇಗದಲಿ || ೫೪ ||

ಗ್ರಾಮಾಧಿಪನು ಅಚ್ಚರಿಗೊಳ್ಳುತ |
ಗಾಬರಿಯಾದನು ಮನದಲ್ಲಿ ||
ಆ ಮಹಾಮಹಿಮನ ಚರಣಕೆ ಎರಗಿ |
ಬೇಡಿಕೊಂಡ ಮನತಾಪದಲಿ || ೫೫ ||

ಮುನಿವರ ಕ್ಷಮಿಸೈ ಅಪರಾಧವನು |
ನಿಲ್ಲಿಸು ಗಳಿಗೆಯ ಶೀಘ್ರದಲಿ ||
ದಾನವ ನೀಡುವ ಗಳಿಗೆಯು ನಡೆದಿಹ |
ಭೂಮಿಯನೆಲ್ಲವ ಚರಣದಲಿ || ೫೬ ||

ಇಂದಿಗೂ ಇರುವವು ಗಳಿಗೆಯ ಸಾಸ್ಯವು |
ಹನಸೀ ಗ್ರಾಮದ ಭೂಮಿಯಲಿ ||
ವಂದ್ಯ ಜಿಷ್ಟೇಶ ವಂಶಜರಾಗಿಹ |
ಮಹಾಪುರುಷರ ವಂಶದಲ್ಲಿ ||೫೭||

ಶಿವಲಿಂಗವನು ಸ್ಥಾಪಿಸಿ ಯೋಗಿಯು |
ಕೆಲದಿನವಿರಲಾ ಸ್ಥಾನದಲಿ ||
ಭಾವಿಕ ಜನರಾ ತಂಡವು ಬೆಳೆಯಿತು |
ಧ್ಯಾನಕೆ ವಿಘ್ನವ ಮಾಡುತಲಿ ||೫೮||

ಮನಃಶುದ್ಧಿಯ ಪಡೆಯುವಲೋಸುಗ |
ಮಲ್ಲಿಕಾರ್ಜುನ ಬೆಟ್ಟದಲಿ ||
ಗುಪ್ತವಾಗಿಹ ಸ್ಥಾನದಿ ಕುಳಿತರು |
ಬಿಲ್ವವೃಕ್ಷದ ಛಾಯೆಯಲಿ ||೫೯||

ತಪವನು ಗೈದರು ಪುನರಪಿ ಧ್ಯಾನದ |
ವರ್ಷದ ಕಾಲವು ನಿಷ್ಠೆಯಲಿ ||
ತಪವನು ಮುಗಿಸಲು ಸಿದ್ಧಿಯ ಪಡೆದರು |
ಕಣ್ಗಳ ತೆರೆದರು ತೇಜದಲಿ ||೬೦||

ಕಣ್ಣಿನ ತೇಜದಿ ಅಲ್ಲಿಯ ಕಲ್ಗಳು |
ಭಸ್ಮವಾದವು ಕ್ಷಣದಲ್ಲಿ ||
ಪುಣ್ಯಕಾರಕ ಭಸ್ಮವು ಇಂದಿಗು
ದೊರೆವುದು ಭಕ್ತರ ಸೋಸಲಿಸಲಿ ||೬೧||

ನಿತ್ಯದಲ್ಲಿ ಶಿವಲಿಂಗವ ಪೂಜಿಸಿ |
ಕಾಲವ ಕಳೆದರು ಧ್ಯಾನದಲಿ ||
ಸಪ್ತ ಯತಿಗಳು ಯೋಗಿಯ ಕಾಣಲು |
ಬಂದರು ಅತಿಥಿಯ ರೂಪದಲಿ ||೬೨||

ಯೋಗಿಯು ಯತಿಗಳ ಸ್ವಾಗತಿಸಿದನು ।
ಕುಶಲವ ಕೇಳಿದ ಪ್ರೇಮದಲಿ
ಆಗಮಿಸಿದ ಕಾರಣ ಕೇಳಿದ ।
ಸೇವೆಗೆ ಸಿದ್ಧನು ಎನ್ನುತಲಿ ॥ ೬೦ ॥

ಭಾ. ಷ ॥

ಹೇಳುವುದಕೇ ಬಂದಿರುವೆವು ।
ಕೇಳು ತಾಪಸವರ್ಯನೇ ನೀ ।
ಹಾಳು ಬಿದ್ದಿವೆ ದೇಗುಲಗಳು ಪುಣ್ಯಕ್ಷೇತ್ರದಲಿ ॥
ಕೀಳು ಬುದ್ಧಿಯು ಮ್ಲೇಂಛ ಜನರು ।
ಗೀಳುಗೈದರು ಹಿಂದುಧರ್ಮವ ।
ಖೂಳತನದಲಿ ಪೀಡಿಸುವರೈ ಸಾಧುಸಜ್ಜನರ ॥ ೬೧ ॥

ಕ್ಷೇತ್ರಪಾಲರು ಕ್ಷೇತ್ರರಕ್ಷಕ ।
ಕ್ಷೇತ್ರದಧಿಪರು ನಾವು ಇರುವೆವು ।
ಕ್ಷೇತ್ರಸ್ಥಾನ ಪವಿತ್ರವಾಗಲು ಸ್ಥಾನ ತ್ಯಜಿಸಿವೆವು ॥
ಭೀತರಾಗಿಹ ಹಿಂದು ಜನರು ।
ಜಾತಿಮತಗಳ ಅಳಿಯುತಿಹರು ।
ನೀತಿ ಧರ್ಮವು ಲೋಪವಾಗುವ ಸಮಯ ಬಂದಿಹುದು ॥ ೬೨ ॥

ಜಗವ ಪಾವನಗೊಳಿಸಬೇಕೈ ।
ಜಗದಿ ಭಕ್ತರ ಬೆಳೆಸಬೇಕೈ ।
ಅಗಜೆನಾಥನ ಆಜ್ಞೆ ನಿನಗಿದೆ ಮರೆತುಬಿಟ್ಟರುವೆ ॥
ಭಗ್ನವಾಗಿಹ ದೇವ ಮಂದಿರ ।
ಭಗ್ನವಾಗಿಹ ಮೂರ್ತಿಗಳನು ।
ಮಗುಳೆ ಪುನರುದ್ಧರಿಸಬೇಕೈ ದೇವನಾಜ್ಞೆ ಇದು ॥ ೬೩ ॥

ಯೋಚನೆ ಮಾಡಿದ ಬಿಷ್ಟಪ್ಪಯ್ಯರು |
ನಿಶ್ಚಯಗೊಂಡರು ಮನದಲ್ಲಿ ||
ನಿರ್ಜನವಾಸವು ಸರಿಯಿಲ್ಲೆನುತ |
ನಡೆದರು ಗಿರಿಯನ್ನಿಳಿಯುತಲಿ || ೬೭ ||

ತುಂಗಾತೀರದಿ ಸಂಗಮವಾಗಿವೆ |
ರಾಮೇಶ್ವರ ಕಾಶೀ ಕ್ಷೇತ್ರಗಳು ||
ರಂಗಾಪುರವೂ ವೇಣೂಪುರಿಯೂ |
ಹೆಸರಾಗಿರುವ ಪುರಾಣದೊಳು || ೬೮ ||

ರಂಗಾಪುರದಲಿ ಪಾವನವಾಗಿಹ |
ನರಹರಿದೇವರ ತಾಣದಲಿ |
ಮಂಗಲ ಮಹಿಮರು ಬಿಷ್ಟಪ್ಪಯ್ಯರು |
ಧ್ಯಾನದಿ ಕುಳಿತಿಹ ಸಮಯದಲಿ || ೬೯ ||

ಸತ್ಯಬೋಧರು ವೈಷ್ಣವ ಗುರುಗಳು |
ಬಂದರು ಸಹಪರಿವಾರದಲಿ ||
ಮತ್ತರಾದ ಪರಿಚಾರಕ ಜನರು |
ಯೋಗಿಯ ಕಂಡರು ಸಿಟ್ಟಿನಲಿ || ೭೦ ||

ಭಸ್ಮವ ನಿಂದಿಸಿ ಗರ್ಜನೆಗೈದರು |
ನಡೆ ಹೊರಸಾಗೆನ್ನುತಲಿ ||
ವಿಸ್ಮಿತನಾಗಿ ಯೋಗಿಯು ಹೊರಟನು |
ಮಹಿಮೆಯ ತೋರಿದ ಕ್ಷಣದಲ್ಲಿ || ೭೧ ||

ಗುರುಗಳ ಗಜಗಳು ಅಂಧವಾದುದನು |
ಕಂಡರು ಸೇವಕರಚ್ಚರದಿ ||
ಅರುಹಿದರಾಗಲೆ ಗುರುಸನ್ನಿಧಿಗೆ |
ನಿಜಸಂಗತಿ ಕಡು ಕಾತರದಿ || ೭೨ ||

ಗುರುಗಳು ಯೋಚಿಸಿ ಮನದಲಿ ತಿಳಿದರು ।
ಯೋಗಿಯ ಮಹಿಮೆಯ ಜ್ಞಾನದಲಿ ॥
ವರಯೋಗಿಯು ತಾ ಬಿಷ್ಟಪ್ಪಯ್ಯನು ।
ಮಹಾಪುರುಷನೆಂದ್ಹೇಳುತಲಿ ॥ ೭೩ ॥

ಕ್ಷಮೆಯನು ಬೇಡಲು ಶಿಷ್ಯರ ಕಳುಹಲು ।
ಯೋಗಿಯು ಭಸ್ಮವ ನೀಡಿದನು ॥
ಕ್ಷೇಮವಾಯಿತು ಭಸ್ಮಸ್ಪರ್ಶದಿ ।
ಯೋಗಿವರ್ಯನ ಕರುಣದಲಿ ॥ ೭೪ ॥

ರಂಗಾಪುರದಲಿ ಸ್ಥಿರವಾಸವನು ।
ಮಾಡಿ ಬಿಷ್ಟೇಶನು ನಿತ್ಯದಲಿ ॥
ತುಂಗಾತೀರದ ದೇಗುಲವೆಲ್ಲವ ।
ಉದ್ಧರಿಸಿದ ಬಹು ಸಂಖ್ಯೆಯಲಿ ॥ ೭೫ ॥

ಕ್ಷೇತ್ರ ವೇಣೂಪುರದಲಿ ಜೊಯಿಸರ ।
ತ್ರಿವೇಣಿ ನಾಮಕ ಕನ್ಯೆಯನು ॥
ಪುತ್ರ ಶಿವಪ್ಪಗೆ ತೆಗೆದುಕೊಂಡರು ।
ವಿವಾಹ ಸಂಭ್ರಮ ಮಾಡಿದರು ॥ ೭೬ ॥

ದೇಗುಲದಲ್ಲಿಯ ಸೇವೆಯ ಮಾಡುವ ।
ಸ್ತ್ರೀಯಳು ನಾಯಕ ಕುಲದವಳು ॥
ಯೋಗಿಯ ಸನ್ನಿಧಿಗೈದಳು ತನ್ನಯ ।
ಅಂಧಪುತ್ರನ ಕರೆತಂದು ॥ ೭೭ ॥

ಬಿಷ್ಟಪ್ಪಯ್ಯನು ಅವಳಿಗೆ ಹೇಳಿದ ।
ಸೇವೆಗೆ ಇಡು ನೀ ನಮ್ಮಲ್ಲಿ ॥
ದೃಷ್ಟಿಯು ಬರುವದು ಖ್ಯಾತಿಯ ಪಡೆವನು ।
ಗುರುವಾಗುವನು ಲೋಕದಲಿ ॥ ೭೮ ॥

ಗೋಣ್ಯಾ ಎನ್ನುವ ನಾಮದ ಬಾಲಕ |
ಯೋಗಿಯಾದ ಕೆಲದಿನದಲ್ಲಿ ||
ಗೋಣಿಸ್ವಾಮಿಯು ಎನ್ನುವ ನಾಮದಿ |
ಖ್ಯಾತಿಪಡೆದನು ಲೋಕದಲ್ಲಿ || ೭೯ ||

ಗೋಣಿಯು ದಿನದಿನ ಯೋಗವ ಸಾಧಿಸಿ |
ಸಿದ್ಧಿಯ ಪಡೆದನು ಕ್ರಮದಲ್ಲಿ ||
ಜನಜಂಗುಳಿಯಲಿ ಮಹಿಮೆಯ ಬೀರಲು |
ನೆಲಸಿದ ತಾ ಗುಂಗೋಳದಲಿ || ೮೦ ||

ಯೋಗದ ಬಲವನು ಗುರುವಿಗೆ ತೋರಲು |
ಗೋಣಿಯು ಹೊರಟನು ಜಂಭದಲಿ ||
ಉಗ್ರವಾಗಿಹ ವ್ಯಾಘ್ರವನೇರಿದ |
ಸರ್ಪದ ಚಬಕವ ಬೀಸುತಲಿ || ೮೧ ||

ಗೋಡೆಯು ಮೇಲೆ ಸಹಜದಿ ಕುಳಿತಿಹ |
ಯೋಗಿ ಕಂಡನು ನಡೆದಸರಿ ||
ಗೋಡೆಗೆ ಆಜ್ಞೆಯ ನೀಡಿದನಾಕ್ಷಣ |
ಸಾಗಿತು ಮುಂದಕೆ ಲೀಲೆಯಲಿ || ೮೨ ||

ಗೋಣೀ ಸ್ವಾಮಿಯು ನೋಡಿದನೆಲ್ಲವ |
ಲಜ್ಜೆಗೊಂಡನು ಮನದಲ್ಲಿ ||
ಮಣಿಸದ ತಲೆಯನು ವ್ಯಾಘ್ರದಿ ಇಳಿದನು
ನಡೆದನು ಪಾದಾಚರ್ಯದಲಿ || ೮೩ ||

ಬಿಷ್ಟಪ್ಪಯ್ಯನು ಸುತ್ತುಮುತ್ತಲಿಹ |
ಪಾಳುದೇಗುಲ ಕಟ್ಟುತಲಿ ||
ಅಷ್ಟ ತೀರ್ಥಗಳ ಸ್ಥಾಪಿಸಿದನು ತಾ |
ತುಂಗಭದ್ರೆಯ ದಡದಲ್ಲಿ || ೮೪ ||

ವಿರುಪಾಕ್ಷೇಶನು ಯತಿರೂಪದಲಿ |
ಬಂದನು ರಂಗಾಪುರದಲ್ಲಿ ||
ಪರಮಪಾವನ ಬಿಷ್ಟಪ್ಪಯ್ಯನ |
ಇರವನು ತಿಳಿಯಲು ಪ್ರೇಮದಲಿ || ೬೫ ||

ಬಿಷ್ಟಪ್ಪಯ್ಯನು ಯತಿಯನು ಕಾಣುತ |
ಆದರಿಸಿದ ಬಹು ಭಕ್ತಿಯಲಿ ||
ಶ್ರೇಷ್ಠರೆ ಆಜ್ಞೆಯ ನೀಡಿರಿ ಎನಗೆ |
ಸೇವೆಗೆ ಸಿದ್ಧನು ಎನ್ನುತಲಿ || ೬೬ ||

ಮುನಿಪುಂಗವನೇ ನಡೆ ಎನ್ನೊಡನೆ |
ಪಂಪಾಕ್ಷೇತ್ರಕೆ ಶೀಘ್ರದಲಿ ||
ಇನ್ನು ಮುಂದಿನ ಕಾರ್ಯವು ನಿನಗಿದೆ |
ವಿರುಪಾಕ್ಷೇಶನ ಸೇವೆಯಲಿ || ೬೭ ||

ಯೋಗಿ ಯತಿಗಳು ಇಬ್ಬರು ನಡೆದರು |
ಬಂದರು ಪಂಪಾಕ್ಷೇತ್ರದಲಿ ||
ಆಗಮಿಸಿದರು ವಿರುಪಾಕ್ಷೇಶನ |
ಅಂತರ್ಗುಡಿಯ ಬಾಗಿಲಲಿ || ೬೮ ||

ಅಂತರ್ಧಾನವ ಹೊಂದಿದ ಯತಿವರ |
ಕಾಣದಾದನು ಗುಡಿಯಲ್ಲಿ
ಅಂತರಂಗದಿ ಬೆರಗುಗೊಂಡನು |
ಬಿಷ್ಟಪ್ಪಯ್ಯನು ಚಿಂತೆಯಲಿ || ೬೯ ||

ಪಂಚಾಕ್ಷರನೇ ಪಂಪಾನಾಥನೆ |
ತಿಳಿಯೆನು ನಿನ್ನಯ ಲೀಲೆಯನು ||
ವಂಚನೆಯಿಲ್ಲದೆ ಮಾಡುವೆ ಸೇವೆಯ |
ನೀಡು ಶೀಘ್ರದಿ ಆಜ್ಞೆಯನು || ೭೦ ||

ಕೋಟಿಸೂರ್ಯನ ತೇಜವು ಹೊಳೆಯಿತು |
ಅಂತರ್ದೇಗುಲ ಭಾಗದಲಿ ||
ಬಿಷ್ಟಪ್ಪಯ್ಯನು ವಿರುಪಾಕ್ಷೇಶನ |
ಕಂಡನು ಸಾಕ್ಷಾತ್ಕಾರದಲಿ || ೯೧ ||

ಮುನಿಪುಂಗವನೇ ಭಕ್ತಶ್ರೇಷ್ಠನೆ |
ಕೇಳು ನೀ ಮಾಡುವ ಕಾರ್ಯವನು ||
ಎನ್ನಯ ದೇಗುಲ ಪೂರ್ವದ್ವಾರಕೆ |
ಕಟ್ಟಿಸು ನೀ ಗೋಪುರವನ್ನು || ೯೨ ||

ಘನಕಾರ್ಯವಿದು ನನ್ನಿಂದಾಗದು |
ಧನವೆಲ್ಲಿರುವದು ನನ್ನಲ್ಲಿ ||
ಅನುಮಾನಿಸದೆ ಕಾರ್ಯಾರಂಭಿಸು !
ಅನುಗ್ರಹವಿರುವದು ನಿನ್ನಲ್ಲಿ || ೯೩ ||

ವಿಶ್ವನಾಥನ ವಚನಕೆ ಯೋಗಿಯು |
ಹರ್ಷಗೊಂಡನು ಮನದಲ್ಲಿ ||
ವಿಶ್ವಕರ್ಮನನು ಕರೆಯಿಸಿ ಹೇಳಿದ |
ದೇವನಾಜ್ಞೆಯುತ್ಸಾಹದಲಿ || ೯೪ ||

ಭಾ. ಷ. ನಿಪುಣರಾಗಿಹ ಶಿಲ್ಪಿಗಾರರು |
ಚಪಲ ಕಾರ್ಮಿಕ ಜನರು ನೆರೆದರು |
ಅಪರಿಮಿತ ಪರಿಶ್ರಮದಿ ಗೋಪುರ ಪ್ರಥಮ ನೆಲೆಯಾಯ್ತು ||
ಉಪರಿನೆಲೆಯನು ಕಟ್ಟತೊಡಗಲು |
ವಿಫಲರಾದರು ಸರ್ವಜನರು |
ಕುಪ್ಪಳಿಸಿತು ಹಗಲು ಕಟ್ಟಿದ ಭಾಗ ರಾತ್ರಿಯಲಿ || ೯೫ ||

ನಿತ್ಯಕ್ರಮವಿದು ನಡೆಯತೊಡಗಲು |
ಚಿತ್ತವಿಭ್ರಮನಾಗಿಯೋಗಿಯು |
ಚಿತ್ತಚಾರಿಯೆ ಎಂದು ತಿಳಿಯಲಿ ನಿನ್ನ ಇಚ್ಛೆಯನು ||
ಭಕ್ತವರ್ಯನೆ ನಿನ್ನ ಕಾರ್ಯಕೆ |
ಶಕ್ತಿದೇವಿಯು ಸ್ತುತಿಸಬಲ್ಲವು |
ತೃಪ್ತಿಗೊಳಿಸೈ ನಿನ್ನ ದೇಹದೊಳರ್ಧವನು ನೀಡಿ || ೯೬ ||

ದೇವನಾಜ್ಞೆಯ ಕೇಳಿ ಭಕ್ತನು |
ಭಾವ ತಿಳಿದನು ಮನದಿ ಯೋಚಿಸಿ |
ದೇವಿಗರ್ಪಿಸಬೇಕು ನಿಜ ಸತಿಯನ್ನು ಆಹುತಿಯಾ ||
ಪಾವನಾತ್ಮ ಪತ್ನಿ ಲಕ್ಷ್ಮೀ |
ದೇವಿ ಇದ್ದಳು ರಂಗಪುರದಲಿ |
ದೇವನಾಜ್ಞೆಯನರುಹಿ ಶೀಘ್ರದಿ ಬರಲು ತಿಳಿಸಿದನು || ೯೭ ||

ಇತ್ತಲಾಸತಿ ಶೀಘ್ರದಲ್ಲಿಯೇ |
ಇತ್ತು ವಾಯನ ದಾನಗಳನು |
ಚಿತ್ತದಲಿ ಪತಿ ಸ್ಮರಿಸಿ ಬಿಟ್ಟಳು ಸ್ಥೂಲದೇಹವನು ||
ಅತ್ತ ಕಂಡಳು ಗೋಪುರದೊಳಗೆ |
ಭಕ್ತರೆಲ್ಲರು ಕರವ ಮುಗಿದರು |
ಎತ್ತರಾಯಿತು ಗೋಪುರವದು ನಿತ್ಯಕ್ರಮದಲ್ಲಿ || ೯೮ ||

ಈಶನಂಶದ ಬಿಷ್ಟಮುನಿಯು |
ತಾನಿರ್ದನು ಪರ್ಣಕುಟಿಯಲಿ |
ಈಶಲಿಂಗವ ಮಾಡುತಿರ್ದನು ನಿತ್ಯಕ್ರಮದಲ್ಲಿ ||
ವಿಂಶತಿ ಶಿವಲಿಂಗ ಮಾಡಿದ |
ವಿಂಶ ದ್ವಿಜರಿಗೆ ನೀಡಿದಾನವ |
ಈಶನರ್ಚನೆ ಮಹಿಮೆ ಬೆಳಸಿದ ಭಕ್ತ ಜನರಲ್ಲಿ || ೯೯ ||

ಮತ್ತೆ ಒಂದನೆ ಲಿಂಗ ಮಾಡಲು ।
ಹತ್ತಿದಾಗಲೆ ಅಗ್ನಿಜ್ವಾಲೆಯು ।
ಸುತ್ತಲೆಲ್ಲವು ಪಸರಿಸುತಲಿ ಬಿಷ್ಟನಾವರಿಸೆ ॥
ಚಿತ್ತಜಾರಿಯು ಅಗ್ನಿಶಿಖೆಯಲಿ ।
ಭಕ್ತವರ್ಯಗೆ ನೀಡಿ ದರ್ಶನ ।
ಇತ್ತನಾಗಲೆ ಚಿನ್ನಕಾಂತಿಯ ರಸದ ಲಿಂಗವನು ॥ ೧೦೦ ॥

ಬಿಷ್ಟಪ್ಪಯ್ಯ ಪುತ್ರ ಶಿವಪ್ಪನು ।
ಹೊರಟನು ಯಾತ್ರಾ ಕ್ಷೇತ್ರದಲಿ ॥
ನಿಷ್ಠೆಯಿಂದಲಿ ಯಾತ್ರೆಯ ಮಾಡುತ ।
ಬಂದನು ಜಾಂಬುವ ಗಿರಿಯಲ್ಲಿ ॥ ೧೦೧ ॥

ಜಾಂಬುವ ಗಿರಿಯಿಂ ಪಂಪಾಗೋಪುರ ।
ಕಾಡಿತು ಶಿವನಿಗೆ ಸಹಜದಲಿ ॥
ಶಾಂಭವಿನಾಥನ ಕರುಣೆಯು ತಪ್ಪಿತು ।
ಹೋದನು ಶಿವ ತಾ ಶಿವನಲ್ಲಿ ॥ ೧೦೨ ॥

ಆರ್ತಳು ತ್ರಿವೇಣಿದೇವಿಯು ಸಹ ।
ಗಮನಕಾಜ್ಞೆಯ ಕೇಳಿದಳು ।
ಧರ್ಮಸಮ್ಮತವಲ್ಲವು ದೇವಿ ।
ಗರ್ಭಿಣಿ ನೀನೆಂದ್ಹೇಳಿದರು ॥ ೧೦೩ ॥

ನವಮಾಸಗಳು ತುಂಬಿದ ಕಾಲಕೆ ।
ಮಹಾದೇವಪ್ಪನು ಜನಿಸಿದನು ॥
ಶಿವಯೋಗಿಯು ಇವ ಕೀರ್ತಿಶಾಲಿಯು ।
ಆಗುವನೆನ್ನುತ ಹರಿಸಿದರು ॥ ೧೦೪ ॥

ಕಾರ್ತಿಕ ಮಾಸದ ಮೂವತ್ತರ ಮಿತಿಗೆ ।
ಪ್ರತಿ ವರ್ಷವು ತಾ ನೇಮದಲಿ ॥
ಕೀರ್ತಿಶೇಷನಿಹ ಶಿವನಾರಾಧನೆ ।
ಮಾಡುತ ಬಂದರು ಕ್ರಮದಲ್ಲಿ ॥ ೧೦೫ ॥

ಚಾತುರ್ಥಾಶ್ರಮ ಪಡೆದನು ಯೋಗಿಯು ।
ಇದ್ದನು ಚವನಾಶ್ರಮದಲ್ಲಿ ॥
ಚಾತುರ್ಯದಲಿ ಲಿಂಗವ ಸ್ಥಾಪಿಸಿ
ಇರ್ದನು ಬಹು ದಿನ ಧ್ಯಾನದಲಿ ॥ ೧೦೬ ॥

ಭಾದ್ರಪದದಲಿ ಶುದ್ಧ ಬಿದಿಗೆಯ ।
ಪುಣ್ಯಕಾರಕ ತಿಥಿಯಲ್ಲಿ ॥
ಚಂದ್ರಮೌಳಿಯ ದರ್ಶನಕಾಗಿ ।
ಹೊರಟನು ಪಂಪಾಕ್ಷೇತ್ರದಲಿ ॥ ೧೦೭ ॥

ಪಂಪಾಕ್ಷೇತ್ರದಿ ವಿರುಪಾಕ್ಷೇಶನ ।
ಅಂತರ್ದೇಗುಲ ಸೇರಿದನು ॥
ಅಂತರ್ಧಾನವ ಹೊಂದಿದನಲ್ಲಿಯೇ ।
ಶಿವರೂಪದಲಿ ಸೇರಿದನು ॥ ೧೦೮ ॥

ಯೋಗಿವರ್ಯ ಶ್ರೀ ಬಿಷ್ಟಪ್ಪಯ್ಯರ । ಚರಿತವ ಸಾರಿದೆ ಜನರಲ್ಲಿ ॥
ಬಾಗಿ ಬೇಡುವೆ ಸಜ್ಜನರೆಲ್ಲರು । ನಿತ್ಯದಿ ಪಠಿಸಿರಿ ನಿಷ್ಠೆಯಲಿ ॥ ೧೦೯ ॥

ಕಟ್ಟಿದೆ ಕವನವ ಆಪಟಿ ವಂಶದ । ಅನಂತರಾಯನು ಭಕ್ತಿಯಲಿ ॥
ಬಿಷ್ಟಪ್ಪಯ್ಯರ ಕರುಣೆಯು ಇರಲಿ । ಸತತವು ನಮ್ಮ ವಂಶದಲಿ ॥ ೧೧೦ ॥



# ಪ್ರಕರಣ ೬

# ವಿಚಾರಸಂಕಲನ

## ೧ ಬಿಷ್ಟೇಶರ ಚರಿತ್ರವು ಅಪ್ರಕಾಶಿತವಾಗಿ ಉಳಿದದ್ದೇಕೆ?

ಈ ಶ್ರೀಮದಾದ್ಯ ಬಿಷ್ಟಪ್ಪಯ್ಯನವರ ಮಹಿಮಾಪೂರಿತ ಚರಿತ್ರವು ಕಟ್ಟುಕಥೆಯಲ್ಲ. ಕಲ್ಪಿತ ಕಾದಂಬರಿಯೂ ಅಲ್ಲ. ಒಂದು ಕಾಲದಲ್ಲಿ ತುಂಗ ಭದ್ರೆಯ ದಂಡೆಗುಂಟ ವಿಹರಿಸಿ, ಅನೇಕ ತೀರ್ಥ, ಕ್ಷೇತ್ರ, ದೇವಸ್ಥಾನ ಗಳನ್ನು ನಿರ್ಮಿಸಿ, ಹಳೆಯವುಗಳನ್ನು ಜೀರ್ಣೋದ್ಧಾರಗೊಳಿಸಿ, ಜನತೆಯಲ್ಲಿ ಭಕ್ತಿಯನ್ನು ಬೆಳೆಯಿಸಲು ಕಾರಣರಾದ ಮಹಾಮಹಿಮಶಾಲಿ ಸತ್ಪುರುಷರ ಸತ್ಯಕಥೆ ಇರುತ್ತದೆ. ಆದರೆ ಇದು ಈ ವರೆಗೂ ಅಪ್ರಕಾಶಿತವಾಗಿಯೇ ಉಳಿದಿದೆ. ಇದಕ್ಕೆ ಕಾರಣಗಳಾದರೂ ಅನೇಕ ಇರುತ್ತವೆ. ಕರ್ನಾಟಕ ದಲ್ಲಿ ಇತಿಹಾಸದ ಹೊಸ ಪುಟವನ್ನು ನಿರ್ಮಿಸುವ ಮಹಾನುಭಾವರು ಅನೇಕರು ಆಗಿದ್ದಾರೆ ಆದರೆ ಅವರ ಇತಿಹಾಸ ಕಾಯ್ದಿಡುವ ಪ್ರವೃತ್ತಿಯು ಕನ್ನಡಿಗರಲ್ಲಿ ಇಲ್ಲದಿರುವದು ಕರ್ನಾಟಕದ ದೌರ್ಭಾಗ್ಯವೆಂದೇ ಹೇಳಬೇಕಾಗು ವದು. ಸ್ವತಃ ಶ್ರೀ ಬಿಷ್ಟೇಶರು ಪ್ರಸಿದ್ಧಿಪಡೆಯಬೇಕೆಂಬ ವಿಚಾರದವರಾಗಿ ದ್ದಿಲ್ಲ. ಅಂತೆಯೇ ಅವರು ತಮ್ಮ ಯಾವ ಕೃತಿಗಳಿಗೂ ತಮ್ಮ ಹೆಸರನ್ನು ಉಲ್ಲೇಖಿಸಿಲ್ಲ. ತಮ್ಮ ಅವತಾರಕೃತ್ಯದ ಗುರಿಯನ್ನೇ ಅವರು ಸಾಧಿಸಿದರೇ ವಿನಃ ಬೇರಾವ ಕಾರ್ಯಗಳನ್ನು ಅವರು ಕೈಕೊಳ್ಳಲಿಲ್ಲ. ಅದರಂತೆಯೇ ಅವರಿಗೆ ಶಿಷ್ಯವರ್ಗವಾಗಲೀ ಭಕ್ತಗಣವಾಗಲೀ ಹೆಚ್ಚಾಗಿ ಇರಲಿಲ್ಲ. ಅವರ ಮಹಿಮೆಯನ್ನು ಕೇಳಿ, ಕಂಡು, ಅರಿತವರು ತಮ್ಮ ತಮ್ಮ ಇಷ್ಟಾರ್ಥಪೂರ್ತಿ ಗಾಗಿ ಅವರ ಕೂಡ ಸಂಪರ್ಕ ಬೆಳಸಿಕೊಳ್ಳುವ ಪ್ರಯತ್ನಮಾಡುತ್ತಿದ್ದ ರಾದರೂ ಶ್ರೀ ಬಿಷ್ಟೇಶರು ತಮ್ಮ ಕಾರ್ಯಕ್ಕೆ ಮತ್ತು ಅನುಷ್ಠಾನಕ್ಕೆ ಈ ಜನಜಂಗುಳಿಯಿಂದ ತೊಂದರೆ ಆಗಬಾರದೆಂದು ಸ್ಥಾನತ್ಯಾಗ ಮಾಡಿ ತಪಶ್ಚರ್ಯಕ್ಕೆ ಹೋಗುತ್ತಿದ್ದರು. ಇಷ್ಟೇ ಅಲ್ಲ, ಮುಂಡೆಯೂ ಈ ಭಾವಿಕ ಜನರ ಕಾಟವು ತಮಗೆ ಆಗಬಾರದೆಂತಲೂ ಭಾವಿಕರ ಇಷ್ಟಾರ್ಥಪೂರ್ತಿಗೆ

ಅಡ್ಡಿಯೂ ಆಗಬಾರದೆಂಬ ಸದುದ್ದೇಶದಿಂದ ತಮ್ಮ ಶಿಷ್ಯವರನಾದ ಗೋಣೀ (ಗುಂಗೋಳ) ಸ್ವಾಮಿಗೆ ಯೋಗಾಭ್ಯಾಸದ ದೀಕ್ಷೆಯನ್ನು ಕೊಟ್ಟು ಅವನ ಮುಖಾಂತರ ಲೋಕಕಲ್ಯಾಣ ಸಾಧಿಸುವಂತೆ ಮಾರ್ಗ ಕೊಟ್ಟರು. ಅಂದಿನಿಂದಲೂ ಆ ಗೋಣೀಸ್ವಾಮಿಯ ಮಹಿಮೆಯು ಮುಂಡರಗೀ ಮಹಾಲಿನ ಪೈಕಿ ಗುಂಗೋಳದಲ್ಲಿ ಅಬಾಧಿತವಾಗಿ ನಡೆಯುತ್ತಲೇ ಇದೆ ಮತ್ತು ಸುತ್ತು-ಮುತ್ತು ಬಹು ದೂರದ ಪ್ರದೇಶ ಗಳಿಂದ ಭಾವಿಕರು ಈ ಸ್ಥಾನಕ್ಕೆ ಬಂದು ತಮ್ಮ ಸೇವೆ, ಕಾಣಿಕೆಗಳನ್ನು ಸಲ್ಲಿಸುತ್ತಲೇ ಇದ್ದಾರೆ. ಪ್ರತಿವರ್ಷ ಚೈತ್ರ ಶುದ್ಧ ದಶಮಿಯಿಂದ ರಥೋತ್ಸವ ಮತ್ತು ಜಾತ್ರೆಯೂ ಆಗುತ್ತವೆ. ಹೀಗೆ ಮೂಲ ಗೋಣೀಸ್ವಾಮಿಯ ಕಾಲದಿಂದ ಇಂದಿನ ವರೆಗೆ ಆತನ ಮಹಿಮೆಯು ನಡೆಯುತ್ತಲೇ ಇದೆ. ಇದು ಆ ಮಹಾಯೋಗಿಗಳಾದ ಶ್ರೀ ಬಿಷ್ಟಪ್ಪಯ್ಯನವರ ಆಶೀರ್ವಾದದ ಫಲವು. ಆದರೆ ಸ್ವತಃ ಬಿಷ್ಟಪ್ಪಯ್ಯನವರ ಚರಿತ್ರೆಯು ಭಾವಿಕರಿಗೆ ಓದಲಿಕ್ಕೆ ಸಿಗದಂತೆ ಆದದ್ದು ಅವರ ಇಚ್ಛೆಯೋ ಅಥವಾ ದೈವೀ ಸಂಕಲ್ಪವೋ ಎಂಬ ಸಂಶಯ ಉಂಟಾಗುತ್ತದೆ. ಕೆಲಜನ ಭಾವಿಕ ಭಕ್ತರ ವಿಚಾರವಾದರೂ ಹೀಗೇ ಇರುತ್ತದೆ. ಆದರೆ ನಿಜವಾಗಿಯೂ ಅವರ ಚರಿತ್ರವನ್ನು ಪ್ರಕಟಿಸಲೇ ಬೇಕೆಂಬ ಕಾಲ ಈಗ ಬಂದಿದೆ ಯಾಕಂದರೆ ಅವರ ಚರಿತ್ರೆಯು ಈ ವರೆಗೆ ಬರೆಯದೇ ಇರಲಿಲ್ಲವೆಂದಲ್ಲ. ಪರೀಕ್ಷಿತರಾಜನು ಏಳೇ ದಿವಸಗಳಲ್ಲಿ ಮೋಕ್ಷಕ್ಕೆ ಸಾಧನವೆಂದು ತನ್ನ ಪೂರ್ವಜರ ಚರಿತ್ರ(ಮಹಾಭಾರತ)ಶ್ರವಣವೇ ತನಗೆ ಯೋಗ್ಯವೆಂದು ಗೊತ್ತುಪಡಿಸಿಕೊಂಡಂತೆ ಶ್ರೀ ಬಿಷ್ಟಪ್ಪಯ್ಯನವರ ವಂಶಜರು ತಮ್ಮ ಉದ್ಧಾರಕ್ಕೆ ಮತ್ತು ಕಲ್ಯಾಣಕ್ಕೆ ಅವರ ಚರಿತ್ರ [ಪುರಾಣ] ಶ್ರವಣ, ಪಠಣವೇ ಆಧಾರವೆಂದು ಅರಿತಿದ್ದರು. ಆ ಪ್ರಕಾರ ಅವರ ಚರಿತ್ರ ವನ್ನು ಸಂಸ್ಕೃತದಲ್ಲಿ ಅನುಷ್ಟುಪ ವೃತ್ತದಲ್ಲಿ ಬರೆಯಿಸಿ ಇಟ್ಟಿದ್ದರು ಮತ್ತು ನಿತ್ಯದ ಪೂಜಾ ಅನುಷ್ಠಾನ ಮುಗಿದ ಮೇಲೆ ಈ ಚರಿತ್ರದ ಪಾರಾಯಣ (ಪಠಣ) ಮಾಡುವ ಪದ್ಧತಿಯು ವಂಶಪರಂಪರಾಗತವಾಗಿ ನಡೆದುಬಂದಿತ್ತು. ಈ ಸಂಗತಿಯನ್ನು ಈಗಲೂ ಕೆಲ ಜನ ವಯೋವೃದ್ಧರು ಹೇಳುತ್ತಾರೆ. ಅಂದಮೇಲೆ ಅವರ ಚರಿತ್ರೆಯನ್ನು ಬರೆಯಲಾಗದು ಎಂಬ ಸಂಶಯಕೆ ಸ್ಥಾನವಿಲ್ಲ. ಆದರೆ ತಮ್ಮ ಪ್ರಸಿದ್ಧಿಯ ಇಚ್ಛೆಯು ಮಾತ್ರ ಅವರಿಗೂ ಅವರ

ವಂಶಜರಿಗೂ ಇದ್ದಿಲ್ಲವೆಂದು ನಿಶ್ಚಿತವಾಗಿ ಹೇಳಬಹುದು. ಹೀಗೆ ಶ್ರೀ ಬಿಷ್ಟೇಶರ ಚರಿತ್ರೆಯು ಪಾರಾಯಣವು ಅವರಿಂದ ಒಂಬತ್ತನೇ ತಲೆಯವರಾದ ಹಿರಿಯ ಮಹಾದೇವಪ್ಪನವರ ಕಾಲದ ವರೆಗೆ ಅಂದರೆ ಸುಮಾರು ೩೫-೪೦ ವರ್ಷಗಳ ಹಿಂದಿನ ಕಾಲದ ವರೆಗೆ ತಪ್ಪದೇ ನಿತ್ಯ ನಡೆಯುತ್ತಿತ್ತು. ಆದರೆ ಕಾಲಚಕ್ರದ ಹೊಡೆತದಲ್ಲಿ ಯಾವದೇ ಸ್ಥಿತಿಯು ಸ್ಥಿರವಾಗಿ ಉಳಿಯುವಂತಿಲ್ಲ ಎಂಬುದೇ ಪ್ರಕೃತಿಯ ನೇಮವಿದ್ದಂತೆ ತೋರುತ್ತದೆ. ಶ್ರೀಮದಾದ್ಯ ಬಿಷ್ಟಪ್ಪಯ್ಯನವರಿಂದ ಒಂಬತ್ತನೇ ತಲೆಯವರಾದ ೩ನೇ ಹಿರಿಯ ಮಹಾದೇವಪ್ಪಯ್ಯನವರ ಕಾಲಕ್ಕೆ ವಿಠ್ಠಲಾಪುರದಲ್ಲಿ ವಾಸಿಸುತ್ತಿರುವ ಅವರ ಮನೆತನದ ಮೇಲೆ ಕಾಲನ ಅವಕೃಪೆಯು ಪ್ರಾರಂಭವಾಯಿತು. ಈ ಮಹಾದೇವಪ್ಪಯ್ಯನವರು ತಮ್ಮ ಇಬ್ಬರು ಮಕ್ಕಳನ್ನು (ಹತ್ತನೇ ತಲೆಯ ಇಬ್ಬರು ಬಿಷ್ಟಪ್ಪಯ್ಯನವರನ್ನು) ಅಲ್ಪ ವಯಸ್ಸಿನವರನ್ನು ಬಿಟ್ಟು ಕಾಲಾಧೀನ ರಾದರು. ಮುಂದೆ ಈ ಹತ್ತನೇ ತಲೆಯ ಇಬ್ಬರೂ ಬಿಷ್ಟಪ್ಪಯ್ಯನವರು ಕೇವಲ ವಂಶವೃದ್ಧಿಯ ಮಟ್ಟಿಗೆ ಇಬ್ಬರೂ ಕೆಲದಿನ ಸಂಸಾರಮಾಡಿ ಮೂವರು ಶಿವಪ್ಪಯ್ಯನವರನ್ನು (ಮಕ್ಕಳನ್ನು) ಅಲ್ಪವಯಿಯಾಗಿ ಬಿಟ್ಟು ಇಬ್ಬರೂ ಸ್ವಲ್ಪೇ ದಿನಗಳ ಅಂತರದಲ್ಲಿ ಕಾಲಾಧೀನರಾದರು. ಹೀಗೆ ಕ್ರಮದಿಂದ ಎರಡು ಪೀಳಿಗೆಯ ಅಲ್ಪವಯೀ ಕಾಲದಲ್ಲಿ ಈ ಮನೆತನದ ಸಂಚಾಲಕತ್ವವು ಅನೇಕ ಜನರ ಕೈಸೇರಿತ್ತು. ಇಂಥ ಈ ದುರವಸ್ಥೆಯ ಕಾಲದಲ್ಲಿ ಶ್ರೀಮದಾದ್ಯ ಬಿಷ್ಟಪ್ಪಯ್ಯನವರ ಪುರಾಣದ ನಿತ್ಯ ಪಾರಾಯಣವು ಸ್ಥಗಿತವಾಯಿತು ಇಷ್ಟೇ ಅಲ್ಲ ಹಸ್ತಲಿಖಿತ ಚರಿತ್ರದ ಪ್ರತಿಯು ಹೇಗೋ ಎಲ್ಲಿಯೋ ಮಾಯ ವಾಯಿತು. ಇದೂ ಒಂದು ದುರ್ಭಾಗ್ಯದಿಂದ ನಮ್ಮ ಕರ್ನಾಟಕದಲ್ಲಿ ರೂಢಿಯೇ ಆಗಿದೆ. ಯಾಕಂದರೆ-ಇಂದಿಗೂ ಎಷ್ಟೋ ಜನರು ತಮ್ಮ ಮನೆ ಯಲ್ಲಿ ಇರುವ ಹಳೆಯ ಮಹತ್ವದ ಪುಸ್ತಕಗಳನ್ನು ಮತ್ತೊಬ್ಬರ ಕೈಗೆ ಕೊಡ ಲಿಕ್ಕಾಗಲೀ ಪ್ರಸಿದ್ಧಪಡಿಸಲಿಕ್ಕಾಗಲೀ ಒಪ್ಪುವದಿಲ್ಲ, ಇರಲಿ.

ತಾನು ಮಾನವರೂಪ ತಾಳಿ ಭೂಮಿಯ ಮೇಲೆ ಮಾಡಿದ ಲೀಲೆಯು ಮರೆತುಹೋಗುವಂತಾದದ್ದಕ್ಕಾಗಿಯೇ ನನ್ನಂಥ ಅಜ್ಞ ಮತ್ತು ಅಭಾವಿಕನ ಕೈಯಿಂದ ಈ ಚರಿತ್ರವನ್ನು ಬರೆಯಿಸುವಂತೆ ಸ್ಫೂರ್ತಿ ಮತ್ತು ಅನುಕೂಲತೆ ಗಳನ್ನುಂಟುಮಾಡಿಕೊಟ್ಟದ್ದು ಆ ವಿರೂಪಾಕ್ಷನ ಇಚ್ಛೆಯಲ್ಲದೇ ಬೇರಿಲ್ಲ.

## ೨ ಈ ಚರಿತ್ರದ ಕಾಲ

ದೊರೆತ ಚರಿತ್ರೆಯ ಹಸ್ತಲಿಖಿತ ಪ್ರತಿಯಲ್ಲಿ ಶ್ರೀ ಬಿಷ್ಟಪ್ಪಯ್ಯನವರು ಅವತರಿಸಿ ಬಾಳಿದ ಕಾಲದ ವಿವರಣೆ ಎಲ್ಲಿಯೂ ಇಲ್ಲ. ಆದರೆ ಕಥಾನಕ ದಲ್ಲಿಯ ಕೆಲವು ಸಂದರ್ಭಗಳ ಮೇಲಿಂದ ಅವರಿದ್ದ ಕಾಲದ ಅಂದಾಜು ಮಾಡ ಲಿಕ್ಕೆ ಬರುವಂತಿದೆ. (೧) ಮಾಧ್ವಮತದ ಶ್ರೀಮದುತ್ತರಾದಿ ಮಠಾಧೀಶ ರಾದ ಶ್ರೀ ಸತ್ಯಬೋಧರು ತಮ್ಮ ಇನಾಮುಗ್ರಾಮ ರಂಗಾಪುರಕ್ಕೆ ಬಂದಾಗ ಅವರ ಶಿಷ್ಯರ ಅನುಚಿತ ವರ್ತನೆಯ ಮೂಲಕ ಅವರ ಗಜಗಳಿಗೆ ಬಂದ ಅಂಧತ್ವವನ್ನು ಭಸ್ಮಲೇಪನದಿಂದ ಬಿಷ್ಟಪ್ಪಯ್ಯನವರು ದೂರಮಾಡಿದರು. (ಸರ್ಗ ೧ ಶ್ಲೋ ೧೦೪) ಶ್ರೀಸತ್ಯಬೋಧರ ಕಾಲವು ಸನ್ ೧೭೬೬ರಿಂದ ೧೭೮೫ರ ವರೆಗೆ ಇರುತ್ತದೆ. ಈ ಕಾಲದಲ್ಲಿ ಶ್ರೀ ಬಿಷ್ಟಪ್ಪಯ್ಯನವರು ಇದ್ದ ರೆಂದು ಸಿದ್ಧವಾಗುತ್ತದೆ.

(೨) ಕ್ಷೇತ್ರದೇವತೆಗಳು ಶ್ರೀ ಬಿಷ್ಟೇಶರಿಗೆ ದರ್ಶನಕೊಟ್ಟು “ತಮ್ಮ ವಿಗ್ರಹಗಳೂ, ಮಂದಿರಗಳೂ, ಮ್ಲೇಂಛರಿಂದ ನಾಶಮಾಡಲ್ಪಟ್ಟವುಗಳಾಗಿವೆ ಅವುಗಳನ್ನು ಜೀರ್ಣೋದ್ಧಾರಮಾಡಿ ಪಾವನಗೊಳಿಸುವ ಕಾರ್ಯವು ನಿನ್ನ ದಾಗಿದೆ” ಎಂದು ಹೇಳಿದ್ದರ ಮೇಲಿಂದ ಈ ಪ್ರಸಂಗವು ವಿಜಯನಗರದ ಸಾಮ್ರಾಜ್ಯವು ನಷ್ಟವಾದ ನಂತರದ್ದಾಗಿದೆ ಎಂದು ಸಿದ್ಧವಾಗುತ್ತದೆ.

(೩) ಶಕೆ ೧೬೬೫ರಲ್ಲಿ ಅಂದರೆ ಕ್ರಿ. ಶ. ೧೭೪೩ರಲ್ಲಿ ಶ್ರೀ ಬಿಷ್ಟಪ್ಪಯ್ಯ ನವರ ಮೊಮ್ಮಕ್ಕಳಾದ ಶ್ರೀ ಮಹಾದೇವಪ್ಪಯ್ಯನವರಿಗೆ ವಿಠ್ಠಲಾಪುರ ಗ್ರಾಮವು ಲಕ್ಷ್ಮೇಶ್ವರದ ಖಾನಗೌಡ ಬಾಹದೂರ ದೇಸಾಯಿಯಿಂದ ಇನಾಮಾಗಿ ದೊರೆತ ಸನದು ಇರುತ್ತದೆ. ಈ ಸಮಯಕ್ಕೆ ಸಮಾರು ೨೫-೩೦ ವರ್ಷಗಳ ಹಿಂದೆ ಶ್ರೀ ಬಿಷ್ಟಪ್ಪಯ್ಯನವರ ಅವತಾರಸಮಾಪ್ತಿ ಆಗಿರಬೇಕು.

(೪) ವಿಜಯನಗರವನ್ನು ಮುಸಲ್ಮಾನರು ನಾಶಗೊಳಿಸಿದ ನಂತರ ಹಂಪಿಯಲ್ಲಿ ಕೆಲವು ದೇವಸ್ಥಾನಗಳನ್ನು ಇವರು ಜೀರ್ಣೋದ್ಧಾರ ಗೊಳಿಸಿದರೆಂದು ಪ್ರತೀತಿಯಿದೆ ಅದೇ ಕಾಲಕ್ಕೆ ಈ ಗೋಪುರವಾದರೂ ಕಟ್ಟಲ್ಪಟ್ಟಿರಬೇಕು.

(೫) ಈಗ ಸಧ್ಯಕ್ಕೆ ಶ್ರೀ ಮದಾದ್ಯ ಬಿಷ್ಟೇಶರಿಂದ ೯ನೇ ೧೦ನೇ ಮತ್ತು ೧೧ನೇ ತಲೆಮಾರಿನವರು ವಿದ್ಯಮಾನರಾಗಿದ್ದಾರೆ. ಒಂದೊಂದು ತಲೆಮಾರಿಗೆ ೨೫-೩೦ ವರ್ಷಗಳ ಮಧ್ಯಮಮಾನ ಕಾಲಾವಧಿ ಹಿಡಿದರೆ ಸುಮಾರು ೨೫೦-೩೦೦ ವರ್ಷಗಳ ಹಿಂದೆ ಬಿಷ್ಟೇಶರ ಕಾಲವೆಂದು ತಿಳಿಯಲು ಅಡ್ಡಿ ಇಲ್ಲ.

“ ಮರೆತು ಹೋದ ಸಾಮ್ರಾಜ್ಯ ” ಎಂಬ ರಾಬರ್ಟ ಸಿವ್ವೆಲನು ಬರೆದ ಪುಸ್ತಕದಲ್ಲಿ ವಿಜಯನಗರದ ಸಾಮ್ರಾಟ ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ಸ್ಮರಣಕ್ಕಾಗಿ ಒಂದು ಸಭಾಮಂಟಪವನ್ನೂ ಮತ್ತು ಒಂದು ಗೋಪುರವನ್ನೂ ಕಟ್ಟಿಸಿದನು. ಅದು ಜನೇವರಿ ೨೩-೨೪ನೇ ತಾರೀಖು ಸನ್ನ ೧೫೧೦ನೇ ಇಸ್ವಿಯಲ್ಲಿ ಕಟ್ಟಿಸಿದನೆಂದೂ ಉಲ್ಲೇಖವಿದ್ದದ್ದನ್ನು ಶಿರಹಟ್ಟಿಯ ಪೇನ್ಶನರ ಮಾಸ್ತರ ಶ್ರೀ. ಆರ್. ಬಿ. ಬಾಲೇಹೊಸೂರ ಇವರಿಂದ ಶೋಧಿಸಲ್ಪಟ್ಟ ಮಾಹಿತಿಯೊಂದು ದೊರೆತಿದೆ. ಆದರೆ ಇಲ್ಲಿ ಶ್ರೀ ಬಿಷ್ಟಪ್ಪಯ್ಯನವರ ಹೆಸರು ಎಲ್ಲಿಯೂ ಬಂದಿಲ್ಲ. ಆದರೆ ಇಂದಿಗೂ ಆ ಗೋಪುರಕ್ಕೆ “ಬಿಷ್ಟಪ್ಪಯ್ಯನ ಗೋಪುರ” ಎಂದು ಜನವಾಣಿ ಸಾರುತ್ತಿರಲು ಇತಿಹಾಸ ಸಂಶೋಧಕನಾದ ‘ಸಿವ್ವೆಲ’ ನಿಗೆ ಈ ಜನವಾಣಿ ಕೇಳದಿದ್ದದ್ದು ಅಥವಾ ಕೇಳಿಯೂ “ಇಂಥ ಮಹತ್ಕಾರ್ಯ ಆ ಬಡಬ್ರಾಹ್ಮಣನಿಂದ ಹೇಗಾಗಬೇಕು.” ಎಂದು ಆ ಜನವಾಣಿಯನ್ನು ಧಿಃಕರಿಸಿ, ಈ ದೊಡ್ಡ ಗೋಪುರವನ್ನು ಕೃಷ್ಣದೇವರಾಯನೇ ಕಟ್ಟಿಸಿದನೆಂದು ಬರೆದಿರಬಹುದು. ಭೌತಿಕ ವಿಚಾರದಲ್ಲಿಯೇ ಬೆಳೆದ ಆ ಆಂಗ್ಲನು ತಪ, ಧ್ಯಾನ, ಅನುಷ್ಠಾನ, ಅಧ್ಯಾತ್ಮಗಳ ಮಹಿಮೆಗಳನ್ನೇನು ಬಲ್ಲನು. ನಮ್ಮ ಜನರಲ್ಲಿ ಹೆಚ್ಚಾಗಿ ಕನ್ನಡಿಗರನ್ನು ನಿಜವಾದ ಇತಿಹಾಸವನ್ನೂ ದುಷ್ಟ ಬುದ್ಧಿಯಿಂದಲೋ ಸ್ವಾರ್ಥದಿಂದಲೋ ಇತ್ತೀಚೆಗಿನ ಕಾಲದಲ್ಲಿ ಇಲ್ಲದಂತೆ ಮಾಡಿದ್ದರಿಂದ ಅಥವಾ ಅವುಗಳನ್ನು ಅಧಿಕೃತವಾಗಿ ಪ್ರಸಿದ್ಧಪಡಿಸದೇ ಇದ್ದದರಿಂದ ಪರಕೀಯ ಇತಿಹಾಸಕಾರರೂ ಸ್ವಾರ್ಥಿ ಆಡಳಿತಗಾರರೂ ಬರೆದಿಟ್ಟ ಇತಿಹಾಸವನ್ನೇ ನಿಜವೆಂದು ನಂಬುವ ಹೀನಸ್ಥಿತಿಯು ನಮ್ಮದ್ದಾಗಿದೆ. ನಮ್ಮ ಭಾರತದ ನಿಜವಾದ ಇತಿಹಾಸವು ಈಗಿನ ಜನರಿಗೆ ಓದಿ ತಿಳಿದುಕೊಳ್ಳಲಿಕ್ಕೆ ಸಿಗದ್ದರಿಂದಲೇ ನಮ್ಮ ಜನರಲ್ಲಿ ಧರ್ಮಾಭಿಮಾನ,

ರಾಷ್ಟ್ರಾಭಿಮಾನ ಮತ್ತು ಸ್ವಾಭಿಮಾನಗಳು ಇಲ್ಲದಂತಾಗಿ ಎಲ್ಲೆಲ್ಲಿಯೂ ಸ್ವಾರ್ಥವು ಬೆಳೆದುನಿಂತಿದೆ.

ಒಟ್ಟಾರೆ ಶ್ರೀ ಮದಾದ್ಯ ಬಿಷ್ಟಪ್ಪಯ್ಯನವರು ಅವತರಿಸಿದ್ದೂ ಈ ಗೋಪುರವನ್ನು ಕಟ್ಟಿಸಿದ್ದೂ ಹದಿನೇಳನೇ ಶತಮಾನದ ಉತ್ತರಾರ್ಧ ಮತ್ತು ಹದಿನೆಂಟನೆಯ ಶತಮಾನದ ಪೂರ್ವಾರ್ಧದ ಕಾಲದಲ್ಲಿ ಎಂದು ಹೇಳಲಡ್ಡಿಯಿಲ್ಲ.

## ೩. ಅಯೋನಿಜರು

ಅಪ್ಪಯ್ಯಜೋಯಿಸರ ಪತ್ನಿಯು ಯಾವದೇ ರೀತಿಯ ಪ್ರಸೂತ ಚಿಹ್ನೆಗಳನ್ನು ಕಾಣದೆ ನಿದ್ರೆಯಲ್ಲಿದ್ದಾಗ ಸಹಜವಾಗಿ ಎಚ್ಚರ ಆಗಲು ಸತಿ-ಪತಿಯರ ಮಧ್ಯದಲ್ಲಿ ಉಲ್ಲಾಸದಿಂದ ಆಡುತ್ತಿರುವ ಕೂಸನ್ನು ಕಂಡರು. ಆ ಕೂಸೇ ಬಿಷ್ಟಪ್ಪಯ್ಯನವರು. ಈ ಸಂಗತಿಯು ಮೇಲಿಂದ ಅವರು ಆಯೋನಿಜರು ಎಂಬ ಮಾತು ಸ್ಪಷ್ಟವಾಗುತದೆ. ಆದರೆ ಇದು ಅತಿರಂಜಿತ ಮತ್ತು ಅಸತ್ಯವೆಂದು ಅಭಾವಿಕರು ತರ್ಕಿಸುವದುಂಟು. ಆದರೆ ಹಿಂದೂಧರ್ಮವು ತರ್ಕಬದ್ಧವಾದದ್ದಲ್ಲ. ಜ್ಞಾನ, ಭಾವನೆಗಳ ಆಧಾರದ ಮೇಲೆ ಬೆಳೆದು ನಿಂತಿದೆ. ಇಲ್ಲಿ ತರ್ಕಟರಿಗೆ (ಸಂಶಯುಖೋರರಿಗೆ) ಸ್ಥಾನವೇ ಇಲ್ಲ.

ಅಜ್ಞಶ್ಚಾಶ್ರದ್ಧಧಾನಸ್ಯ ಸಂಶಯಾತ್ಮಾ ವಿನಶ್ಯತಿ ।

"ಅಜ್ಞನೂ ಶ್ರದ್ಧೆ ಇಲ್ಲದವನೂ ಆದ ಸಂಶಯುಖೋರನು ನಾಶಹೊಂದುತ್ತಾನೆ. ಇದು ಭಗವಂತನ ವಾಕ್ಯವು. ಇದರ ಮೇಲೆ ನಂಬಿಗೆ ಇದ್ದವರು ಶ್ರೀ ಬಿಷ್ಟಪ್ಪಯ್ಯನವರ ಆಯೋನಿಜತ್ವದ ಬಗ್ಗೆ ಸಂಶಯುಪಡುವದು ಮಹತ್ಪಾಪವು. ನಮ್ಮ ಪುರಾಣಗಳಲ್ಲಿ ಇಂಥ ಅನೇಕ ಉದಾಹರಣೆಗಳು ಇರುತ್ತವೆ. ದಶರಥಪತ್ನಿಯುರು ಯಜ್ಞದೇವನು ನೀಡಿದ ಪಾಯುಸ ಭಕ್ಷಣದಿಂದ ನಾಲ್ವರು ಪುತ್ರರನ್ನು ಪಡೆಯಲಿಲ್ಲವೇ? ಅದೇ ಪ್ರಸಾದವನ್ನು ಭಕ್ಷಿಸಿ, ಅಂಜನಾದೇವಿಯು ಅಂಜನೇಯುನನ್ನು ಹೆತ್ತಿಳಲ್ಲವೇ? ಕುಂತೀಪುತ್ರನಾದ ಕರ್ಣನು ಅಯೋನಿಜನಲ್ಲವೇ? ಹೀಗೆ ಒಂದಲ್ಲ ಎರಡಲ್ಲ ನೂರಾರು ಉದಾಹರಣೆಗಳು ಇರುತ್ತಿರಲು ಶ್ರೀ ಬಿಷ್ಟಪ್ಪಯ್ಯನವರು ಅಯೋನಿಜರು ಹೇಗೆ ಎಂದು ಸಂಶಯುಪಡುವದು ಯೋಗ್ಯವಲ್ಲ

ಇಷ್ಟೇ ಅಲ್ಲ, ಅವರು 'ಅಯೋನಿಜ'ರು ಅನ್ನುವದಕ್ಕಿಂತ 'ಅಜರು' ಅಂದರೆ ಜನ್ಮರಹಿತರು ಅನ್ನುವದು ಹೆಚ್ಚು ಸಯುಕ್ತಿಕವಾಗುತ್ತದೆ. ಯಾಕಂದರೆ ಅವರ ಚರಿತ್ರೆಯ ಮೊದಲನೇ ಸರ್ಗದಲ್ಲಿ ೨೪ರಿಂದ ೩೫ನೇ ಶ್ಲೋಕಗಳ ವರೆಗಿನ ವಿಷಯಗಳ ಮೇಲಿಂದ ಈ ಮಾತಿನ ಸತ್ಯತೆ ಕಂಡು ಬರುತ್ತದೆ. ಅವುಗಳಲ್ಲಿಯೇ ೩೦, ೩೧ನೇ ಶ್ಲೋಕಗಳು ಈ ಮಾತಿನ ಸ್ಪಷ್ಟತೆ ಯನ್ನು ಹೆಚ್ಚಾಗಿ ಮಾಡಿಕೊಡುತ್ತವೆ.

ತವಪುತ್ರಮೇಷ್ಯಾಮಿ ಲೀಲಾಮಾನುಷವಿಗ್ರಹಃ ।
ಇತ್ಥಂ ವ್ಯಾಹೃತ್ಯ ಭಗವಾನ್ ಪುತ್ರೀಯಂ ಫಲಮುತ್ತಮಂ ।
ಕರೇ ದದೌ ತವ ಕ್ಷೇತ್ರಂ ಪ್ರವಿಶ್ಯಾಮೀತಿ ಸಾಧಕಂ ।
ವೃಜಗೇಹಂ ವತ್ಸ ರೇತಂ ಪತ್ನೀಂ ಮಾಸ್ಪರ್ಶದೇಹತಃ ॥

"ಲೀಲಾಮಾನುಷರೂಪ ಧಾರಣಮಾಡಿ ನಿನ್ನ ಪುತ್ರತ್ವವನ್ನು ವಹಿಸು ವೆನು." ಎಂದು ಹೇಳಿ ಪುತ್ರೀಯವಾದ ಫಲವನ್ನು ಕೊಟ್ಟು ನಿನ್ನ ಕ್ಷೇತ್ರದಲ್ಲಿ (ಹೆಂಡತಿಯ ಗರ್ಭದಲ್ಲಿ) ನಾನು ಆದರದಿಂದ ಪ್ರವೇಶಮಾಡುವೆನು ಆದರೆ ನೀನು ರೇತಪತ್ನಿಯನ್ನು ಸ್ಪರ್ಶಿಸಬೇಡ" ಎಂದು ಭಗವಂತನು ಸ್ಪಷ್ಟವಾಗಿ ಆಜ್ಞೆಮಾಡಿದ್ದಾನೆ. ಇಲ್ಲಿ ಜನನ ಬೋಧಕ ಅರ್ಥವುಳ್ಳ ಶಬ್ದವೇ ಇಲ್ಲ. ಕೇವಲ ಅಪ್ಪಯ್ಯಜೋಯಿಸರಿಗೆ ತಮ್ಮ ತಪಸ್ಸಿನ ಫಲವಾಗಿ ಸಂತತಿಲಾಭ ವಾಗುವದೆಂಬ ಮಾಯೆಯಲ್ಲಿ ಸಿಲುಕಿಸುವದಕ್ಕಾಗಿಯೂ ಅವರ ಪತ್ನಿಗೆ ಗರ್ಭವತಿ ಆದ ಆನಂದವುಂಟಾಗಲಿ ಎಂಬುವದಕ್ಕಾಗಿಯೂ ಅಪ್ಪಯ್ಯ ಜೋಯಿಸರ ಪತ್ನಿಯ ಉದರದಲ್ಲಿ ಒಂಬತ್ತು ತಿಂಗಳಕಾಲ ಶ್ರೀವಿರುಪಾಕ್ಷೇಶನು ಗರ್ಭರೂಪದಲ್ಲಿ ವಾಸವಾಗಿದ್ದು ಲೋಕರೂಢಿಯ ಪ್ರಕಾರ ಆ ವಿಪ್ರಪತ್ನಿಯು ನವಮಾಸ ತುಂಬುವ ವರೆಗೆ ಗರ್ಭವತಿಯ ಸುಖ-ಸೋಹಳಗಳನ್ನು ಅನು ಭವಿಸಿದ ನಂತರ ಒಂದು ದಿವಸ ವಿರುಪಾಕ್ಷೇಶನು ರಾತ್ರಿಯಲ್ಲಿ ಶಿಶು ರೂಪವನ್ನು ಧಾರಣಮಾಡಿ ಸತಿ, ಪತಿಗಳ ಲೀಲೆಯಿಂದ ಆಟವಾಡಹತ್ತಿದನು. ಇಲ್ಲಿಯೂ ಜನನದ ಸಂಬಂಧವು ಬರಲಿಲ್ಲ. ಆದರಂತೆಯೇ "ಜಾತಸ್ಯ ಹಿ-ಧ್ರುವೋ ಮೃತ್ಯುಃ" ಈ ನಿಯಮವೂ ಶ್ರೀ ಬಿಷ್ಟಪ್ಪಯ್ಯನವರಿಗೆ ಹತ್ತಲಿಲ್ಲ. ಯಾಕಂದರೆ ಅವರ ಅವತಾರ ಸಮಾಪ್ತಿಯು ಕೂಡಾ ದೇಹವನ್ನು ಬಿಟ್ಟು

ಆಗಿರದೇ ಸದೇಹವಾಗಿ ವಿರುಪಾಕ್ಷೇಶನ ವಿಗ್ರಹದಲ್ಲಿ ಅದೃಶ್ಯರಾದುದರಿಂದ ಅವರಿಗೆ ಮರಣದ ಸೋಂಕೂ ತಾಗಲಿಲ್ಲ. ಅಂದರೆ ಅವರು ಮರಣಹೊಂದ ಲಿಲ್ಲ. ಅರ್ಥಾತ್ ಅವರಿಗೆ ಹುಟ್ಟೂ ಇಲ್ಲ; ಸಾವೂ ಇಲ್ಲ.

## ೪. ತಪಸ್ಸು ಮತ್ತು ಪವಾಡಗಳು ಏಕೆ?

ಶ್ರೀ ಬಿಷ್ಟಪ್ಪಯ್ಯನವರು ಉಪನಯನವಾದ ಕೂಡಲೇ ತಪಶ್ಚರ್ಯಕ್ಕೆ ಹೊರಟರು. ದುಷ್ಟರು ದ್ವಾರವನ್ನು ಬಂಧಿಸಿದಾಗ ಪರಮಾತ್ಮನ ಸ್ತುತಿಮಾಡಿ ಪಾದುಕೆ ಚಿತ್ರಗಳನ್ನು ಪಡೆದರು. ಹುಣಿಸೇಮರದಿಂದ ಹಾಲು ಹರಿಸಿದರು. ಗಳಿಗೆಯನ್ನು ನಡಿಸಿದರು. ಗೋಡೆಯನ್ನು ನಡಿಸಿದರು. ಇಂಥವೇ ಇನ್ನೂ ಅನೇಕ ಪವಾಡಗಳನ್ನು ಮಾಡಿದರು. ಇವೆಲ್ಲವುಗಳ ಅವಶ್ಯಕತೆ ಏನು? ಭಗವಂತನೇ ಮಾನವರೂಪ ಧರಿಸಿ ಬಂದಿರುವನೆಂದಮೇಲೆ ಅವರು ಯಾರನ್ನು ಕುರಿತು ತಪಸ್ಸುಮಾಡಿದರು? ಪವಾಡಗಳನ್ನು ತೋರಿಸುವಲ್ಲಿ ತಮ್ಮ ಪ್ರತಿಷ್ಠೆ ಬೆಳೆಯಬೇಕೆಂತಲೋ? ಇಂಥ ಅನೇಕ ಪ್ರಶ್ನೆಗಳು ಉದ್ಭವಿಸು ತ್ತವೆ. ಇವೆಲ್ಲವುಗಳಿಗೆ ಒಂದೇ ಮಾತಿನಲ್ಲಿ ಸಮಾಧಾನ ಮಾಡುವದು ಅಶಕ್ಯವು ಆದರೂ ಮುಖ್ಯ ಮಾತೆಂದರೆ ವಿರುಪಾಕ್ಷೇಶನು ಮಾನವರೂಪ ಧಾರಣಮಾಡಿದ್ದರಿಂದ ಸಾಮಾನ್ಯ ಮನುಷ್ಯರಂತೆಯೇ ವರ್ತಿಸುವದು ಅವಶ್ಯ ವಾಗಿತ್ತು. ಅಲ್ಲದೇ ಮಾನವೀ ರೂಪವನ್ನು ಧಾರಣಮಾಡಿದ ಮೇಲೇ, ಪರಮಾತ್ಮನಿಗಾದರೂ ಮಾನವೀಬುದ್ಧಿ, ಮನಸ್ಸುಗಳ ಕಿಲ್ಮಿಷವು ತಟ್ಟದೆ, ಇರಲಾರದು. ಅಂದರೆ ತನ್ನನ್ನೇ ತಾನು ಮರೆಯುವದು ಸಹಜವು. ಜೀವಾತ್ಮ ಪರಮಾತ್ಮರಲ್ಲಿಯ ಭೇದವಾದರೂ ಇದೇ ಇರುತ್ತದೆ. ಈ ಮಾನವೀ ಶರೀರಧಾರಿ ಆತ್ಮನು ಇಂದ್ರಿಯ, ಬುದ್ಧಿ, ಮನಸ್ಸುಗಳ ತಾಕಲಾಟ ದಲ್ಲಿ ತನ್ನನ್ನು ತಾನು ಮರೆಯುತ್ತಾನೆ. ಈ ಮರೆವನ್ನು ಕಳೆದು ನಿಜರೂಪ ವನ್ನು ಅರಿತುಕೊಳ್ಳಲಿಕ್ಕೆ ತಪಸ್ಸನ್ನಾಚರಿಸುವದು ಅಗತ್ಯವಾದದ್ದು ಎಂಬ ಮಾತನ್ನು ಮುಮುಕ್ಷು ಜನರಿಗೆ ತಿಳಿಸುವದಕ್ಕಾಗಿಯೂ ಮತ್ತು ಸ್ವತಃ ತನಗಾದ ಆತ್ಮವಿಸ್ಮೃತಿಯ ಮಾಲಿನ್ಯವನ್ನು ಕಳೆದುಕೊಳ್ಳುವದಕ್ಕಾಗಿ ಅವರು ತಪಸ್ಸನ್ನಾಚರಿಸುವದು ಅವಶ್ಯವಾಗಿತ್ತು ಅಂತೆಯೇ ಅವರ ಒಂದಲ್ಲದೇ ಐದು ಸಲ ತಪಸ್ಸನ್ನಾಚರಿಸಿದರು.

ಬಿಷ್ಟಪ್ಪಯ್ಯನವರು ಕಾಲಕಾಲಕ್ಕೆ ಪ್ರಸಂಗಕ್ಕನುಸಾರವಾಗಿ ಅನೇಕ ಪವಾಡಗಳನ್ನು ಮಾಡಿದರು ಇದಾವದೂ ಅವರು ತಮ್ಮ ಪ್ರತಿಷ್ಠೆ ಮಹಿಮೆಗಳನ್ನು ಬೆಳೆಯಿಸಿಕೊಳ್ಳುವದಕ್ಕಾಗಿ ಅಲ್ಲ. ಅಥವಾ ದ್ವೇಷಾಸೂಯೆ ಗಳಿಂದ ಸೇಡು ತೀರಿಸುವದಕ್ಕಾಗಿಯೂ ಅಲ್ಲ. ಸಾಧುನಿಂದಕರಲ್ಲಿಯ ದುಷ್ಟ ಬುದ್ಧಿಯನ್ನು ದೂರಮಾಡುವದಕ್ಕಾಗಿಯೂ ಶಿವಭಕ್ತರಿಗೆ, ಶಿವೋಪಾಸಕರಿಗೆ ಅಸಾಧ್ಯವಾದದ್ದು ಯಾವದೂ ಇಲ್ಲ ಎಂಬುದನ್ನು ಮನಗಾಣಿಸಿ ಜನತೆಯಲ್ಲಿ ಶಿವಭಕ್ತಿಯನ್ನು ಬೆಳೆಯಿಸುವದಕ್ಕಾಗಿಯೇ ದ್ವಾರಭೇದನ ಗಳಿಗೆ ನಡೆ ಯಿಸುವದು, ಹಣಿಸೇಗಿಡದಿಂದ ಹಾಲು ಸುರಿಸಿದ್ದು ಇಂಥ ಪವಾಡ ಗಳನ್ನು ಮಾಡಿದರು.

ವೈಷ್ಣವ ಯತಿಗಳ ಆನೆಗಳಿಗೆ ಅಂಧತ್ವ ಬಂದದ್ದು ಭಸ್ಮಲೇಪನದಿಂದ ಪರಿಹಾರ ಮಾಡಿದ್ದಾದರೂ ದ್ವೇಷಾಸೂಯೆಗಳ ದ್ಯೋತಕವಾಗಿರದೆ ಭಸ್ಮ ನಿಂದಕರಿಗೆ ಭಸ್ಮದ ಮಹಿಮೆಯನ್ನು ತೋರಿಸುವದಕ್ಕಾಗಿ. ಹೀಗೆಯೇ ಇನ್ನೂ ಅನೇಕ ಪವಾಡಗಳನ್ನು ಮಾಡಿದ್ದಾದರೂ ದುಷ್ಟರಿಗೆ ಪರಿತಾಪ, ಸಾಧುಗಳ ರಕ್ಷಣೆ ಮತ್ತು ಶಿವಭಕ್ತಿಯ ಪ್ರಸಾರ ಇವೇ ಉದ್ದೇಶಗಳಿಗಾಗಿ. ಒಟ್ಟಾರೆ ಬಿಷ್ಟಪ್ಪಯ್ಯನವರು ತಮ್ಮ ಸ್ವಾರ್ಥಕ್ಕಾಗಿ ಪ್ರತಿಷ್ಠೆಗಾಗಿ ಯಾವ ಪವಾಡ ಗಳನ್ನೂ ಮಾಡಿರಲಿಲ್ಲ. ಕೇವಲ ಜನತೆಯಲ್ಲಿ ಬೆಳೆಯುತ್ತಿರುವ ಅಧರ್ಮ ಪ್ರವೃತ್ತಿ ದೂರವಾಗಿ, ಪರಮಾತ್ಮನಲ್ಲಿ ಭಕ್ತಿ, ವಿಶ್ವಾಸಗಳು ಬೆಳೆದು ಶಿವೋಪಾಸನೆಯಲ್ಲಿ ಆಸಕ್ತಿ ಹುಟ್ಟುವಂತೆ ಡಾಂಭಿಕ ಉಪದೇಶದಿಂದ ಕಾರ್ಯ ಮಾಡದೆ ತಮ್ಮ ಸದಾಚರಣೆಯಿಂದಲೂ ನಿತ್ಯ ದೃಷ್ಟಿಪಥ ದಲ್ಲಿ ಉಳಿಯುವ ದೇವಾಲಯಾದಿ ಕಟ್ಟಡಗಳನ್ನು ಕಟ್ಟಿಸಿಯೂ ತಮ್ಮ ಗುರಿ ಸಾಧಿಸಿದರು.

## ೫. ತ್ಯಾಗಮೂರ್ತಿ ಲಕ್ಷ್ಮಾಂಬೆ

ಶ್ರೀ ಬಿಷ್ಟೇಶರ ಚರಿತ್ರೆಯಲ್ಲಿ ಅವರ ಪತ್ನಿ ಆದರ್ಶ ಪತಿವ್ರತಾಶಿರೋ ಮಣಿಯರಾದ ಲಕ್ಷ್ಮಾಂಬೆಯವರು ಬಹು ದೊಡ್ಡ ಸ್ಥಾನವನ್ನು ಹೊಂದಿ ದ್ದಾರೆ. ತಮ್ಮ ಪತಿದೇವರು ಕೈಕೊಂಡ ಕಾರ್ಯಪೂರ್ತಿಗಾಗಿ ಸದೇಹವಾಗಿ ಗೋಪುರಕ್ಕೆ ಆಹುತಿಯಾದರು. ಶ್ರೀ ಜಗದಂಬಾ ದುರ್ಗಾದೇವಿಯ ಇಚ್ಛೆಯು

ಹಾಗಿತ್ತು. ಶ್ರೀ ಬಿಷ್ಟೇಶರು ವಿರೂಪಾಕ್ಷ ಸ್ವರೂಪರು. ಗೋಪುರ ಕಟ್ಟಿದ ಕಾರ್ಯವಾದರೂ ವಿರುಪಾಕ್ಷೇಶನದೇ ಮತ್ತು ಆತನ ಆಜ್ಞೆಯಂತೆ ಕಾರ್ಯವು ನಡೆದದ್ದು. ಹೀಗಿದ್ದು ದುರ್ಗಾಂಬೆಯು ಈ ಕಾರ್ಯಕ್ಕೆ ವಿಘ್ನವನ್ನೇಕೆ ತರಬೇಕು? ಆಹುತಿಯನ್ನೇಕೆ ಬೇಡಬೇಕು? ಈ ಪ್ರಶ್ನೆಗಳಿಗೆ ಸಮಂಜಸ ಉತ್ತರ ಕೊಡುವದು ಕಠಿಣವು. ಆದರೂ ನನ್ನ ಬುದ್ಧಿಗೆ ತಿಳಿಯುವ ಒಂದೇ ಒಂದು ಮಾತೆಂದರೆ ದೇವತೆಗಳು ಕೂಡ ತಮ್ಮ ಪ್ರತಿಷ್ಠೆಗೆ ಕುಂದು ಬಂದದ್ದನ್ನು ಸಹಿಸಲಾರರು. ಅಂತೂ ಶ್ರೀ ದುರ್ಗಾದೇವಿಯು ಇಚ್ಛೆಯಂತೆ ತಮ್ಮ ಪತ್ನಿಯನ್ನು ಗೋಪುರಕ್ಕೆ ಆಹುತಿ ಕೊಡಲು ಸಿದ್ಧರಾದರು. ಪತಿದೇವರ ಆದೇಶದಂತೆ ಶ್ರೀ ಲಕ್ಷ್ಮಮ್ಮಂಬೆಯವರು ಸದೇಹವಾಗಿ ಗೋಪುರಕ್ಕೆ ಆಹುತಿ ಆದರು. ಇಲ್ಲಿ ಶ್ರೀ ಬಿಷ್ಟೇಶರು ಮಹಾಪತಿವ್ರತೆಯರೂ ಸದಾ ಕಾರ್ಯತತ್ಪರರೂ ಸೇವಾತತ್ಪರರೂ ಆದರ್ಶ ಸದಾಚರಣೆಯುಳ್ಳವರೂ ತಮ್ಮ ಪ್ರೀತಿ ಪಾತ್ರರೂ ಆದ ಲಕ್ಷ್ಮಮ್ಮಂಬೆಯರನ್ನು ಆಹುತಿ ಕೊಡಲಿಕ್ಕೆ ಸಿದ್ಧರಾದರು. ಈ ಸಂಗತಿಯು ಸಾಮಾನ್ಯ ತ್ಯಾಗವಲ್ಲ. ಆದರೆ ಶ್ರೀ ಬಿಷ್ಟೇಶರು ತ್ಯಾಗವೇ ಮೂರ್ತಿಯಾಗಿ ನಿಂತವರು, ಆತ್ಮಜ್ಞಾನಿಗಳು. ಪ್ರತ್ಯಕ್ಷ ಶಿವರೂಪರು. ಇಂಥವರು ಮಾಡಲುದ್ಯುಕ್ತರಾದ ಈ ತ್ಯಾಗಕ್ಕಿಂತಲೂ ಈ ಯಾವ ಅರ್ಹತೆಗಳೂ ಇರದೆ ಕೇವಲ ಸಾಮಾನ್ಯ ಗೃಹಿಣಿಯರಾದ ಲಕ್ಷ್ಮಮ್ಮಂಬೆಯರು ಪತಿದೇವರ ಇಚ್ಛೆಯಂತೆ ವರ್ತಿಸುವದೇ ತಮ್ಮ ಧರ್ಮವೆಂದೂ ತಮಗೆ ತಾರಕವೆಂದೂ ಉದಾತ್ತವಾದ ಒಂದೇ ವಿಚಾರದಿಂದ ಆತ್ಮಾರ್ಪಣೆಗೆ ಮಾಡಿದ ತ್ಯಾಗವು ಅಸಾಮಾನ್ಯವಾದದ್ದು. ಸಾಮಾನ್ಯವಾಗಿ ಅಗ್ನಿಪ್ರವೇಶಮಾಡಿ, ಜಲದಲ್ಲಿ ಮುಳುಗಿ, ವಿಷಭಕ್ಷಣೆ ಮಾಡಿ, ಅಥವಾ ಶಸ್ತ್ರದಿಂದ ಹೊಡೆದು ಕೊಂಡು ಆತ್ಮಾರ್ಪಣೆ ಮಾಡಿದ ಉದಾಹರಣೆಗಳು ಅನೇಕ ಇರಬಹುದು. ಆದರೆ ಸ್ವಸಂತೋಷದಿಂದ ಗೋಪುರದ ಮಧ್ಯದಲ್ಲಿ ಕುಳಿತು, ತಮ್ಮ ಕಣ್ಣೆದುರಿನಲ್ಲಿಯೇ ಸುತ್ತಲೂ ಗೋಡೆಗಳು ಏರುತ್ತಿರುವದನ್ನು ನೋಡುತ್ತಲೂ ಅಚಲರಾಗಿ ಕುಳಿತದ್ದೂ ಮುಂದೆ ಕ್ರಮೇಣ ಶ್ವಾಸನಿರೋಧದಿಂದ ಚಡಪಡಿಸುವ ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ದೇಹವು ಕ್ಷೀಣವಾಗಿ ಆತ್ಮವು ಹೊರಗೆ ಹೋಗುವ ವರೆಗೂ ಸಮಾಧಾನದಿಂದಲೇ ಇದ್ದದ್ದು ಅಸಾಮಾನ್ಯವೇ ಸರಿ. ಪತಿಯೇ ನನ್ನ ದೇವತೆ, ಪತಿಯ ಹಿತವೇ ತನ್ನ ಧ್ಯೇಯ. ಪತಿಯ

ಆಜ್ಞೆಯೇ ತಮಗೆ ವೇದವಾಕ್ಯ ಎಂದು ಭಾವಿಸಿ ಬೇಕಾದ ತ್ಯಾಗ ಮಾಡಲು ಹಿಂದೂ ಮಹಿಳೆಯರು ಸಿದ್ಧರಿರುತ್ತಾರೆ. ಪುರಾಣದಲ್ಲಿ, ಇತಿಹಾಸದಲ್ಲಿ ಇಂಥ ಅನೇಕ ಉದಾಹರಣೆಗಳನ್ನು ಕಾಣಬಹುದು. ಅನೇಕ ಶಾಸ್ತ್ರ, ಪುರಾಣಗಳನ್ನು ಓದಿದವರೂ, ತತ್ವಜ್ಞಾನಿಗಳೂ, ನಿತ್ಯಾನುಷ್ಠಾನತತ್ಪರರೂ, ಆಚಾರಶೀಲರೂ ಆದ ವಿಪ್ರರಿಂದ ಆಗಲಾರದಂಥ ಸ್ವಾರ್ಥತ್ಯಾಗವನ್ನು ಸಾಮಾನ್ಯರಾದ ಗೃಹಿಣಿಯರು ಸಹಜವಾಗಿ ಮಾಡಬಲ್ಲರು ಎಂಬುದು ಶ್ರೀ ಲಕ್ಷ್ಮಮ್ಮಂಬೆಯವರ ಈ ಆತ್ಮಬಲಿದಾನವೇ ನಿದರ್ಶನವಾಗಿದೆ. ಹಿಂದೂಧರ್ಮದಲ್ಲಿ ಕುಟುಂಬ ಸಂಸ್ಥೆಯನ್ನು ಪ್ರಸ್ಥಾಪಿಸಿದ ಜ್ಞಾನಿಗಳಾದ ಋಷಿಮುನಿಗಳು ಸ್ತ್ರೀಯರಿಗಾಗಿ ಸಂಬೋಧಿಸಿದ ಸಂಸ್ಕೃತಿಯೇ ಅಷ್ಟು ಶ್ರೇಷ್ಠತರದ್ದಾಗಿದೆ. ರಾಷ್ಟ್ರಕ್ಕಾಗಿ, ಸಮಾಜಕ್ಕಾಗಿ, ಬಾಂಧವರಿಗಾಗಿ, ದೀನ-ದರಿದ್ರರಿಗಾಗಿ ಸಹ ಬಲಿದಾನ, ಸ್ವಾರ್ಥತ್ಯಾಗಗಳನ್ನು ಮಾಡಿದ ಉದಾಹರಣೆಗಳನ್ನು ನಮ್ಮ ಭಾರತದ ಇತಿಹಾಸದಲ್ಲಿಯೂ ಪುರಾಣಗಳಲ್ಲಿಯೂ ಅನೇಕವಾಗಿ ಕಾಣಬಹುದು. ಇದೇ ಹಿಂದೂ ಸಂಸ್ಕೃತಿಯ ಹಿರಿಮೆಯು. ಶ್ರೀಲಕ್ಷ್ಮಮ್ಮಂಬೆಯವರು ಗೋಪುರಕ್ಕೆ ಆಹುತಿ ಆದದ್ದರ ಪ್ರತ್ಯಕ್ಷದಿಗ್ದರ್ಶನವೆಂದು ಈ ಗೋಪುರದ ಎರಡನೇ ಅಂತಸ್ತಿನ ಆರಂಭದಲ್ಲಿ ಕಲ್ಲಿನಲ್ಲಿ ಕೊರೆದು ಕೂಡಿಸಿದ ಸ್ತ್ರೀ ವಿಗ್ರಹವನ್ನು ಕಾಣಬಹುದು.

## ೬. ಮಹಾಲಿಂಗ ಪ್ರಾಪ್ತಿ

ಶ್ರೀ ಬಿಷ್ಟಪ್ಪಯ್ಯನವರು ವಾಸಿಸುತ್ತಿದ್ದ ಗುಡಿಸಲಿನ ಸುತ್ತಲೂ ಅಗ್ನಿ ಜ್ವಾಲೆಯು ಪ್ರಜ್ವಲಿತವಾಗಿ ಆ ಜ್ವಾಲೆಯಲ್ಲಿಯೇ ಶ್ರೀ ಪಂಪಾಪತಿಯು ಪ್ರತ್ಯಕ್ಷನಾಗಿ ಒಂದು 'ರಸಲಿಂಗ'ವನ್ನು ಕೊಟ್ಟನು. ಈ ರಸಲಿಂಗವನ್ನೇ ಶ್ರೀ ಬಿಷ್ಟಪ್ಪಯ್ಯನವರು ತಮ್ಮ ಅಂಗೈಯಲ್ಲಿ ಇಟ್ಟುಕೊಂಡು ಸರ್ವೋಪಚಾರಗಳಿಂದ ಪೂಜಿಸುತ್ತಿದ್ದರು. ಈಗ ಈ ರಸಲಿಂಗವೇ 'ಮಹಾಲಿಂಗ' ಎಂಬ ಹೆಸರಿನಿಂದ ವಿಠಲಾಪುರದಲ್ಲಿ ಪೂಜಿಸಲ್ಪಡುತ್ತದೆ. ಈ ಮಹಾಲಿಂಗವು ಹೆಸರಿಗೆ ತಕ್ಕಂತೆ ಬಹು ದೊಡ್ಡದೂ, ಭಾರವುಳ್ಳದ್ದೂ ಆಗಿರುತ್ತದೆ. ಈ ಲಿಂಗಕ್ಕಿಂತ ದೊಡ್ಡದೂ, ಭಾರವುಳ್ಳದ್ದೂ ಬೇರೆ ಎಲ್ಲಿಯೂ ಇಲ್ಲವೆಂದಲ್ಲ. ಆದರೆ ಈ ಲಿಂಗವು ಶ್ರೀ ಬಿಷ್ಟಪ್ಪಯ್ಯನವರ ಕರತಲದಲ್ಲಿ ಪೂಜಿಸಲ್ಪಟ್ಟದ್ದು. ಆ ಮಾನದಂತೆ ಅದು ಮಹಾಲಿಂಗವೇ ಸರಿ. ಮತ್ತು

ಇಂಥ ಲಿಂಗವನ್ನು ಕರತಲದಲ್ಲಿ ಧರಿಸಿ ಪೂಜಿಸುವ ಆ ಮಹಾಯೋಗಿಯ ಯೋಗಸಾಮರ್ಥ್ಯವನ್ನು ಎಷ್ಟು ಬಣ್ಣಿಸಬೇಕು.

ಈ ಮಹಾಲಿಂಗವೇ ಇಂದಿಗೂ ಶ್ರೀಬಿಷ್ಟಪ್ಪಯ್ಯರ ವಂಶಜರಲ್ಲಿ ಹಿರಿಯ ಮನೆತನದವರು ವಾಸಿಸುತ್ತಿರುವ ವಿಠ್ಠಲಾಪುರದಲ್ಲಿ ಇದ್ದು ನಿತ್ಯವೂ ಪೂಜಾ ಅನುಷ್ಠಾನಾದಿಗಳು ನಡೆಯುತ್ತವೆ. ಈ ಮಹಾಲಿಂಗವು ಮೊದಲು ರಂಗಾಪುರದಲ್ಲಿಯೇ ಶ್ರೀರಾಮೇಶ್ವರ ದೇವಾಲಯದಲ್ಲಿ ಇಡಲಾಗಿತ್ತು. ಇತ್ತೀಚೆ ರಂಗಾಪುರ ಗ್ರಾಮವು ನಿರ್ಜನವಾದ್ದರಿಂದ ಶ್ರೀಬಿಷ್ಟಪ್ಪಯ್ಯನವರ ವಂಶಜರು ತಮ್ಮದೇ ಇನಾಮುಗ್ರಾಮವಾದ ವಿಠಲಾಪುರದಲ್ಲಿ ಬಂದು ಇರಹತ್ತಿದರು. ಬಿಷ್ಟಪ್ಪಯ್ಯನವರಿಂದ ಒಂಬತ್ತನೇ ತಲೆಯವರಾದ ಹಿರಿಯಮಹಾದೇವಪ್ಪಯ್ಯನವರ ಕಾಲಕ್ಕೆ ಈ ಮಹಾಲಿಂಗವು ರಂಗಾಪುರದಿಂದ ವಿಠಲಾಪುರಕ್ಕೆ ತರಲ್ಪಟ್ಟು ಶ್ರೀ ಬಿಷ್ಟಪ್ಪಯ್ಯನವರೇ ಸ್ಥಾಪಿಸಿದ ವಿಠಲ ಮಂದಿರದಲ್ಲಿ ಸ್ಥಾಪಿಸಲಾಯಿತು. ಅಂದಿನಿಂದ ಈ ವಿಠ್ಠಲಾಪುರವು ಸುತ್ತು-ಮುತ್ತಲಿನ ಭಾಗದಲ್ಲಿ ಅವರ ಭಕ್ತ ಜನರಿಗೆ ಪವಿತ್ರ ಕ್ಷೇತ್ರಸ್ಥಾನವಾಗಿದೆ. ರುದ್ರಾಭಿಷೇಕ, ಲಘುರುದ್ರ, ಮಹಾರುದ್ರ. ಮುಂತಾಗಿ ಅನುಷ್ಠಾನಗಳು ಮೇಲಿಂದ ಮೇಲೆ ಜರಗುತ್ತವೆ. ಈ ಸ್ಥಾನವು ಬಹು ಜಾಗೃತವಾದದ್ದಿದೆ ಎಂದು ಭಾವಿಸಲಾಗುತ್ತದೆ. ನಿತ್ಯ ಪೂಜೆ, ಆರತಿ, ನೈವೇದ್ಯಾದಿಗಳನ್ನು ಈ ಮನೆತನದವರು ಮಾಡುತ್ತಾರಲ್ಲದೆ ಶಿವರಾತ್ರಿ ಶಿವಪರ್ವಣಿಗಳಂಥ ದಿನಗಳಲ್ಲಿ ವಿಶೇಷ ಪೂಜಾ, ಅರ್ಚನೆ, ಅಭಿಷೇಕಾದಿಗಳು ಜರಗುತ್ತವೆ. ಭಕ್ತಜನರೂ ಕಾಲಕಾಲಕ್ಕೆ ಅಭಿಷೇಕಾದಿಗಳನ್ನು ಮಾಡಿಸುತ್ತಾರೆ. ನಿಜವಾಗಿ ಶ್ರೀಬಿಷ್ಟೇಶರಿಗೆ ಪಂಪಾನಾಥನು ಕೊಟ್ಟ ಈ ಮಹಾಲಿಂಗವು ಅವರ ವಂಶದವರಿಗೂ ಭಕ್ತರ ಸಮೂಹಕ್ಕೂ ಶ್ರೇಯೋಭಿವೃದ್ಧಿಗೂ ವಂಶವೃದ್ಧಿಗೂ ಕಲ್ಯಾಣಕಾರಿಯಾಗಿದೆ. ಎಂದು ತಿಳಿಯಲಾಗುತ್ತದೆ.

## ೭. ಶ್ರೀ ಮಹಾದೇವಪ್ಪಯ್ಯನವರ ಮಹಿಮೆಗಳು

ಹಿಂದೆ ಮೂರನೆಯ ಪ್ರಕರಣದಲ್ಲಿ ಶ್ರೀ ಮಹಾದೇವಪ್ಪಯ್ಯನವರ ಚರಿತ್ರೆಯು ಶ್ಲೋಕ ಮತ್ತು ಅರ್ಥ ಸಹಿತ ಬರೆಯಲ್ಪಟ್ಟಿದೆ. ಇನ್ನೂ ಕೆಲವು ಮಹಿಮೆಗಳು ಜನವಾಣಿಯಲ್ಲಿ ಇಂದಿಗೂ ಕೇಳಬರುತ್ತವೆ. ಅವುಗಳಿಗೆ ಲೇಖೀ

ಆಧಾರಗಳೇನೂ ಇಲ್ಲದಿದ್ದರೂ ಅವುಗಳ ಸತ್ಯತೆಯನ್ನು ಸಿದ್ಧಪಡಿಸುವಷ್ಟು ಪ್ರಾತ್ಯಕ್ಷಿಕೆಗಳು ಇಂದಿಗೂ ಕಂಡು ಬರುವಂತಿವೆ ಒಮ್ಮೆ ಆರಾಧನೆಗೆ ಬೆಲ್ಲ ಇಲ್ಲದಂತಾದಾಗ "ಹನುಮಂತನು ಪ್ರೇರೇಪಿಸಲ್ಪಟ್ಟಿದ್ದಾನೆ. ಸ್ವಲ್ಪ ಹೊತ್ತಿನಲ್ಲಿ ಬರಬಹುದು" ಎಂದು ಹೇಳಿದ ಪ್ರಕಾರ ಸ್ವಲ್ಪೇ ಹೊತ್ತಿನಲ್ಲಿ ನೂರಾರು ಜನರು ಬೆಲ್ಲವನ್ನು ಹೊತ್ತುಕೊಂಡು ತಂದರಷ್ಟೇ? ಆಗ ಶ್ರೀ ಮಹಾದೇವಪ್ಪಯ್ಯನವರು "ಬೆಲ್ಲ ಸಾವಕಾಶವಾಗಿ ಒಡೆಯಿರಿ ಒಂದು ಪೆಂಟೆಯಲ್ಲಿ ಹನುಮಂತನು ಬಂದಿದ್ದಾನೆ" ಎಂದು ಹೇಳಿದರು ಆ ಪ್ರಕಾರ ಬೆಲ್ಲದ ಪೆಂಟೆಯಲ್ಲಿ ಹನುಮಂತನ ಕಲ್ಲಿನ ವಿಗ್ರಹವು ಸಿಕ್ಕಿತು ಅಂದಿನಿಂದಲೂ ಹನುಮಜ್ಜಯಂತಿ ಉತ್ಸವವು ಪ್ರಾರಂಭಿಸಲ್ಪಟ್ಟಿತು. ಈ ಮೂರ್ತಿಯು ಹತ್ತು ಅಂಗುಲ ಪ್ರಮಾಣ ಎತ್ತರದ್ದಿದ್ದು ಕೌಪೀನ (ಕಾಶಿ) ಆಭರಣ, ಕಂಠೀಸರ, ಮುಕ್ತಾಹಾರ ಮುಂತಾದವುಗಳು ಆ ಮೂರ್ತಿಗೆ ಇರುತ್ತವೆ. ಇಂದಿಗೂ ಈ ಹನುಮಂತನು ಬೆಲ್ಲದ ಹನುಮಪ್ಪ ಎಂಬ ಹೆಸರಿನಿಂದ ವಿಠ್ಠಲಾಪುರದಲ್ಲಿ ಶ್ರೀ ಮಹಾಲಿಂಗೇಶನ ಸನ್ನಿಧಿಯಲ್ಲಿ ನಿತ್ಯ ಪೂಜಿಸಲ್ಪಡುತ್ತಾನೆ.

ಮತ್ತೊಮ್ಮೆ ಭಟ್ಟೀ ಆರಾಧನೆಯಲ್ಲಿ ಬ್ರಾಹ್ಮಣ ಭೋಜನದ ಪ್ರಾರಂಭಕ್ಕೆ ತುಪ್ಪವು ಇಲ್ಲದ್ದು ತಿಳಿಯಿತು. ಆಗ ಶ್ರೀ ಮಹಾದೇವಪ್ಪಯ್ಯನವರು ತುಂಗಭದ್ರೆಯಿಂದ ಐದು ಕೊಡ ತುಪ್ಪವನ್ನು ಕೇಳಿ ತೆಗೆದುಕೊಂಡು ಬನ್ನಿರಿ ಎಂದು ಸೇವಕರಿಗೆ ಆಜ್ಞಾಪಿಸಿದರು. ಕೂಡಲೇ ಸೇವಕರು ನದಿಯಿಂದ ಐದು ಕೊಡ ನೀರು ತಂದು ಇಡಲು ಪುನಃ ಇಷ್ಟು ತುಪ್ಪವನ್ನು ತುಂಗಭದ್ರೆಗೆ ತಿರುಗಿ ಅರ್ಪಿಸುವ ಸಂಕಲ್ಪಮಾಡಿ ಶ್ರೀ ಅನ್ನಪೂರ್ಣಾದೇವಿಯನ್ನು ಪೂಜಿಸಲು ಆ ನೀರು ಆಗಲೇ ಕಾಸಿದ ತುಪ್ಪವಾಗಿ ಅಂದಿನ ಬ್ರಾಹ್ಮಣ ಭೋಜನವು ಸಾಗಿತು. ಮರುದಿವಸ ಬೇರೆ ಗ್ರಾಮಗಳಿಂದ ಬಂದ ತುಪ್ಪದಲ್ಲಿ ಐದು ಕೊಡ ತುಪ್ಪವನ್ನು ಒಯ್ದು ತುಂಗಭದ್ರೆಗೆ ಅರ್ಪಿಸಿದರು. ಅಂದಿನಿಂದಲೂ ಅವರ ಮನೆತನದಲ್ಲಿ ಬ್ರಾಹ್ಮಣಭೋಜನಾದಿ ಅನ್ನ ಸಂತರ್ಪಣೆಯ ಕಾಲಕ್ಕೆ ಮೊದಲು ಅನ್ನಪೂರ್ಣಾದೇವಿಯ ಪೂಜೆ ಮಾಡುತ್ತಾರೆ.

"ನಾರಾಯಣದೇವರ ಕೆರೆ" ಎಂಬ ಗ್ರಾಮದಲ್ಲಿ (ಈಗ ಈ ಗ್ರಾಮವು ತುಂಗಭದ್ರಾ ಆಣೆಕಟ್ಟಿನ ಜಲಾಶಯದಲ್ಲಿ ಮುಳುಗಿದೆ) ಒಂದು ಹೊಸ

ಮನೆಯಲ್ಲಿ ಬ್ರಹ್ಮರಾಕ್ಷಸವು ಸೇರಿಕೊಂಡಿತ್ತು ಅದು ಆ ಮನೆಯಲ್ಲಿ ವಸತಿ ಮಾಡಿದವರನ್ನು ಸರಿ ರಾತ್ರಿಯಲ್ಲಿ ತಿಂದುಬಿಡುತ್ತಿತ್ತು. ಒಮ್ಮೆ ಶ್ರೀ ಮಹಾದೇವಪ್ಪಯ್ಯನವರು ಸಂಚಾರಕ್ಕೆ ಆ ಗ್ರಾಮಕ್ಕೆ ಹೋದಾಗ ಈ ಹೊಸ ಮನೆಯೇ ಅವರಿಗೆ ವಾಸಕ್ಕಾಗಿ ದೊರಕಿತ್ತು. ನಿತ್ಯದಂತೆ ಸರಿ ರಾತ್ರಿಗೆ ಆ ರಾಕ್ಷಸವು ಬಂದು ಇವರನ್ನು ನೋಡಿ "ತಿನ್ನುತ್ತೇನೆ" ಎಂದು ಗರ್ಜಿಸಿತು. ಆಗ ಅವರು ತಮ್ಮ ಯೋಗಸಾಮರ್ಥ್ಯದಿಂದ ಆ ರಾಕ್ಷಸನನ್ನು ಗಟ್ಟಿಯಾಗಿ ಬಂಧಿಸಿ, ಬುಡಮೇಲಾಗಿ ತಮ್ಮ ವಾಹನದ ಬುಡದಲ್ಲಿ ತೂಗಾಡುವಂತೆ ಮಾಡಿದರು. ಇದೇ ರೀತಿಯಿಂದ ಅವನನ್ನು ಇಟ್ಟು ಎಷ್ಟೋ ದೂರ ದೂರ ಸಂಚಾರ ಮಾಡಿದ ನಂತರ ಆ ರಾಕ್ಷಸನ ಪ್ರಾರ್ಥನೆಗೆ ಮೆಚ್ಚಿ ರಾಕ್ಷಸತ್ವದಿಂದ ನಿವೃತ್ತರನ್ನಾಗಿ ಮಾಡಿದರು.

ಶ್ರೀ ಮಹಾದೇವಪ್ಪಯ್ಯನವರು ಧರ್ಮಪ್ರಸಾರಾರ್ಥವಾಗಿ ಮತ್ತು ದಿಗ್ವಿಜಯಕ್ಕಾಗಿ ಇಡಿ ಕರ್ನಾಟಕದಲ್ಲೆಲ್ಲ ಸಂಚರಿಸಿ ಅನೇಕ ಗ್ರಾಮ, ಸೀಮೆ, ಮನ್ನಣೆ, ಬಿರುದಾವಳಿಗಳನ್ನು ಪಡೆದು ಪ್ರಖ್ಯಾತರಾದರು. ಹೀಗೆಯೇ ಸಂಚಾರಮಾಡುತ್ತ ಶ್ರೀಮತ್ ಶಂಕರಾಚಾರ್ಯರ ಪೀಠವಿದ್ದ ಶೃಂಗೇರಿಗೆ ಹೋಗುವದನ್ನು ನಿಶ್ಚಯಿಸಿದರು. ಅವರು ಅಲ್ಲಿಗೆ ತಲ್ಪುವ ಮೊದಲಿನ ದಿವಸ ರಾತ್ರಿ ಶ್ರೀ ಶಾರದಾದೇವಿಯು ಆಗಿನ ಶ್ರೀಜಗದ್ಗುರುಗಳ ಸ್ವಪ್ನದಲ್ಲಿ ಬಂದು "ನಾಳೆ ಒಬ್ಬ ಮಹಾತ್ಮನು ನಿನ್ನ ದರ್ಶನಕ್ಕೆ ಬರುತ್ತಾನೆ. ಅವನಿಗೆ ಬಿರುದಾವಳಿಗಳನ್ನು ಕೊಟ್ಟು ಸತ್ಕರಿಸು" ಎಂದು ಹೇಳಿದಳು. ಮರುದಿವಸವೇ ಶ್ರೀ ಮಹಾದೇವಪ್ಪಯ್ಯನವರು ಶೃಂಗೇರಿಗೆ ಆಗಮಿಸಿದರು. ಆದರೆ ಅಲ್ಲಿಯ ಪಂಡಿತರು ಗೃಹಸ್ಥಾಶ್ರಮಿ ಎಂಬ ನೆವದಿಂದ ಶ್ರೀ ಮಹಾ-ದೇವಪ್ಪಯ್ಯನವರನ್ನು ನಮಸ್ಕರಿಸಲಿಲ್ಲ. ವಾದದಲ್ಲಿ ತಮ್ಮನ್ನು ಗೆದ್ದರೆ ಅವರನ್ನು ಸನ್ಮಾನಿಸಬಹುದು ಎಂದು ಹೇಳಿದರು. ಇದನ್ನು ತಿಳಿದವರಾಗಿ ಅವರು ಮಠದಲ್ಲಿ ನೀರು ತರುವ ಸೇವಕನಾದ ನಾಗೇಶನೆಂಬುವನಿಗೆ ಉಪದೇಶ ಕೊಟ್ಟು ಭಸ್ಮವನ್ನು ಅಭಿಮಂತ್ರಿಸಿ ಕೊಡಲು ಅವನು ಎಲ್ಲ ವಿದ್ಯೆಯಲ್ಲಿ ಪಾರಂಗತನಾದನು ಅವನನ್ನು ವಾದಕ್ಕಾಗಿ ಕಳಿಸಲು ಎಲ್ಲರನ್ನೂ ಗೆದ್ದನು. ಈ ಬಗ್ಗೆ 'ನಾಗೇಶಭಟ್ಟ' ಎಂಬ ಪ್ರಯೋಗ ಗ್ರಂಥವು ಪ್ರಸಿದ್ಧ ಇರುವದೆಂದು ಜನಾಭಿಪ್ರಾಯವಿರುತ್ತದೆ. ಈ ನಾಗೇಶ

ಭಟ್ಟನ ಪಾಂಡಿತ್ಯವನ್ನು ನೋಡಿ, ನೀರು ಹೊರುವವನಿಗೆ ಶ್ರೀ ಮಹಾದೇವಪ್ಪಯ್ಯನವರ ಮಹಿಮೆಯಿಂದ ಬಂದ ಪಾಂಡಿತ್ಯಕ್ಕೆ ಬೆರಗುಗೊಂಡರು. "ಈ ಮಹಾತ್ಮನು ಪರೀಕ್ಷಿಸಲ್ಪಡತಕ್ಕವನಲ್ಲ. ಮಹಾ ಶಕ್ತಿಯುಳ್ಳವನು" ಎಂದು ಅವರನ್ನು ಪೂಜಿಸಿ ನಮಸ್ಕರಿಸಿದರು. ಶ್ರೀ ಜಗದ್ಗುರುಗಳು ಅವರಿಗೆ ೬೦ ಬಿರುದುಗಳನ್ನು ಮತ್ತು ಸುವರ್ಣ, ರತ್ನಗಳನ್ನು ಕೊಟ್ಟು ಸತ್ಕರಿಸಿದರು ಮತ್ತು "ನಪರೀಕ್ಷಣೀಯೋ ಮಹಾತ್ಮಾ ಅಘಟಿತಘಟನಾ ಚತುರಂ ಮತ್ವಾ ಸಂಮಾನ್ಯ ದಂಡವನ್ನಮಸ್ಕೃತ್ಯ ಸಂಪೂಜ್ಯ" ಎಂಬ ಬಹುಮಾನ ವಾಕ್ಯವನ್ನು ಸಾರಿದರು.

ಹೀಗೆ ಶ್ರೀ ಮದಾದ್ಯ ಬಿಷ್ಟಪ್ಪಯ್ಯನವರು ಅವರ ಮಕ್ಕಳಾದ ಶ್ರೀ ಶಿವಪ್ಪಯ್ಯನವರು ಮತ್ತು ಮೊಮ್ಮಕ್ಕಳಾದ (ಶ್ರೀ ಶಿವಪ್ಪಯ್ಯನವರ ಮಕ್ಕಳಾದ) ಮಹಾದೇವಪ್ಪಯ್ಯನವರೂ ಮಹಿಮಾಶಾಲಿಗಳಾಗಿ ಖ್ಯಾತಿವಂತರಾದರು ಮಹಾಪುರುಷರೆಂದು ಹೆಸರು ಪಡೆದರು. ಇವರ ವಂಶದವರಿಗೂ "ಮಹಾಪುರುಷ" ಎಂಬ ಉಪನಾಮವೇ ಇಂದಿಗೂ ರೂಢವಾಗಿದೆ. ಶ್ರೀ ಮದಾದ್ಯ ಬಿಷ್ಟಪ್ಪಯ್ಯನವರಿಂದ ೯ನೇ ತಲೆಮಾರಿನ ವರೆಗೆ ಈ ಮನೆತನದವರು. ರಂಗಾಪುರದಲ್ಲಿಯೇ ಇರುತ್ತಿದ್ದರು. ಅಲ್ಲಿಯ ವರೆಗೆ ಈ ಮನೆತನವು ಒಂದು ಸಂಸ್ಥಾನದಂತೆ ಸರಂಜಾಮಿನೊಡನೆ ಸುವ್ಯವಸ್ಥಿತವಾಗಿ ಶೋಭಿಸುತ್ತಿತ್ತು ಮುಂದೆ ರಂಗಾಪುರವು ಬೇಚಿರಾಕ (ಜನವಸತಿ ಇಲ್ಲದಂತೆ) ಆದದ್ದರಿಂದ ಈ ೯ನೇ ತಲೆಯವರಾದ ೩ನೇ ಮಹಾದೇವಪ್ಪಯ್ಯನವರ ಕಾಲಕ್ಕೆ ಈ ಮನೆತನದವರು ರಂಗಾಪುರವನ್ನು ಬಿಟ್ಟು ತುಂಗಭದ್ರಾ ನದಿಯ ಎಡದಂಡೆಗೆ ತಮ್ಮದೇ ಇನಾಮುಗ್ರಾಮವಾಗಿದ್ದ ವಿಠ್ಠಲಾಪುರಕ್ಕೆ ಬಂದು ಇರಹತ್ತಿದರು. ಈ ಮಹಾದೇವಪ್ಪಯ್ಯನವರು ಮೂವರು ಸಹೋದರರು. ಹಿರಿಯ ಮಹಾದೇವಪ್ಪಯ್ಯ ಚಿಕ್ಕ ಮಹಾದೇವಪ್ಪಯ್ಯ ಮತ್ತು ಸಣ್ಣ ಮಹಾದೇವಪ್ಪಯ್ಯ ಹೀಗೆ ಇವರು ಮೂವರೂ ಬಂಧುಗಳು; ಇದೇ ಕಾಲಕ್ಕೆ ವಿಭಕ್ತರಾಗರು. ಹಿರಿಯ ಮಹಾದೇವಪ್ಪಯ್ಯನವರು ವಿಠ್ಠಲಾಪುರದಲ್ಲಿ, ಚಿಕ್ಕ ಮಹಾದೇವಪ್ಪಯ್ಯನವರು ತಮ್ಮದೇ ಇನಾಮು ಗ್ರಾಮವಾದ ಮೇವುಂಡಿಯಲ್ಲಿ ಮತ್ತು ಸಣ್ಣ ಮಹಾದೇವಪ್ಪಯ್ಯನವರು ತಮ್ಮ ಇನಾಮುಗ್ರಾಮವಾದ ಅಂಬಲೀಕೊಪ್ಪದಲ್ಲಿ ಇರಹತ್ತಿದರು. ಈಗ

ವಿಠ್ಠಲಾಪುರದಲ್ಲಿ ಹಿರಿಯ ಮಹಾದೇವಪ್ಪಯ್ಯನವರ ಮೊಮ್ಮಕ್ಕಳಾದ ಮೂವರು ಶಿವಪ್ಪಯ್ಯನವರು ಸಧ್ಯಕ್ಕೆ ಇರುತ್ತಾರೆ. ಮೇವುಂಡಿಯಲ್ಲಿ ಚಿಕ್ಕ ಮಹಾದೇವಪ್ಪಯ್ಯನವರ ಮಕ್ಕಳಾದ ಬಿಷ್ಟಪ್ಪಯ್ಯನವರು ಇರುತ್ತಾರೆ. ಮತ್ತು ಅಂಬಲೀಕೊಪ್ಪದಲ್ಲಿದ್ದ ಸಣ್ಣ ಮಹಾದೇವಪ್ಪಯ್ಯನವರು, ವಾಸ್ತವ್ಯದ ಅನುಕೂಲಕ್ಕಾಗಿ ಧಾರವಾಡದಲ್ಲಿ ಮನೆಮಾಡಿಕೊಂಡು ಇರುತ್ತಾರೆ.

ಈ ಮೂರೂ ಗ್ರಾಮಗಳು ಇಲ್ಲಿಯ ವರೆಗೆ ಅವರ ಮನೆತನಕ್ಕೆ ಇನಾಮಾಗಿಯೇ ಇದ್ದವು. ಈಗ ಕಾಂಗ್ರೆಸ ಸರಕಾರದ ಝಳ ತಾಕಿ ಇನಾಮ ಹಕ್ಕು ಇಲ್ಲದಾಗಿದ್ದರೂ ಆಯಾ ಗ್ರಾಮಗಳಲ್ಲಿಯ ಬಹು ಭಾಗ ಜಮೀನುಗಳು ಅವರವರ ಒಡೆತನದಲ್ಲಿ ಇರುತ್ತವೆ. ಈ ಗ್ರಾಮಗಳಲ್ಲದೇ 'ಬಸವನಕೊಪ್ಪ' ಎಂಬ ಇನಾಮುಗ್ರಾಮವು ಶ್ರೀ ಮಹಾಲಿಂಗೇಶನ ನಿತ್ಯ ಪೂಜೆ, ನೈವೇದ್ಯಗಳಿಗಾಗಿ ಮತ್ತು ವಂಶಪರಂಪರಾಗತವಾಗಿ ಪ್ರತಿವರ್ಷ ಜರುಗುತ್ತ ಬಂದಿರುವ ಆರಾಧನೆ ಮೊದಲಾದ ಸಮಾರಂಭಗಳ ಖರ್ಚಿಗಾಗಿ ಮೂರೂ ಮನೆತನದವರ ಒಟ್ಟಿನಲ್ಲಿ ಇಡಲಾಗಿದೆ ಮತ್ತು ಪ್ರತಿವರ್ಷ ಒಂದೊಂದು ಮನೆತನದವರು ಕ್ರಮದಂತೆ ಈ ಗ್ರಾಮದ ಉತ್ಪನ್ನವನ್ನು ತಕ್ಕೊಂಡು ಪೂಜೆ, ನೈವೇದ್ಯ, ಆರಾಧನೆ ಉತ್ಸವಾದಿಗಳನ್ನು ಸಾಂಗಗೊಳಿಸುತ್ತಾರೆ.

## ೬ ಉತ್ಸವಾದಿಗಳು

ಶ್ರೀ ಬಿಷ್ಟಪ್ಪಯ್ಯನವರ ವಂಶದವರಲ್ಲಿ ಹಿರಿಯ ಮನೆತನದವರು ವಾಸಿಸುತ್ತಿರುವ ವಿಠ್ಠಲಾಪುರದಲ್ಲಿ ಪ್ರತಿ ವರ್ಷವೂ ಕೆಲವು ಉತ್ಸವಾದಿಗಳು ಸಾಂಘಿಕವಾಗಿ ಜರಗುತ್ತಿರುವದು ಒಂದು ವೈಶಿಷ್ಟ್ಯವೆಂದೇ ಹೇಳಬೇಕಾಗುವದು. ಖರ್ಚು, ವ್ಯವಸ್ಥೆಗಳ ಹೊಣೆ ವಂಶಿಕರ ಮೇಲೆ ಇದ್ದರೂ ಆಮಂತ್ರಣಾದಿ ಆಡಂಬರಗಳ ಇಚ್ಛೆಯನ್ನಿಟ್ಟುಕೊಳ್ಳದೇ ಕೇವಲ "ಗುರುಸೇವೆ" ಎಂಬ ಭಾವನೆಯಿಂದ ಎಲ್ಲ ಭಕ್ತಗಣವೂ ಸೇರಿ ಸ್ವಯಂಸ್ಫೂರ್ತಿಯಿಂದ ಭಾಗವಹಿಸಿ ಶ್ರಮಿಸುತ್ತಾರೆ ಇದು ಆ ಮಹಾಮಹಿಮರ ಪ್ರಭಾಶಕ್ತಿಯ ದ್ಯೋತಕವೆಂದು ಹೇಳಬಹುದು. ಶ್ರೀ ಬಿಷ್ಟಪ್ಪಯ್ಯನವರು ಅವತಾರ ಸಮಾಪ್ತಿ ಮಾಡುವ ಮೊದಲೇ ಅವರ ಮಕ್ಕಳಾದ ಶಿವಪ್ಪಯ್ಯನವರು ಶಿವರೂಪ ಹೊಂದಿದ್ದರಿಂದ ಅವರ ಕೀರ್ತಿ, ಸ್ಮೃತಿಗಳು ಸ್ಥಿರವಾಗಿ ಉಳಿಯಲೆಂತಲೂ

ತಮ್ಮ ವಂಶಕ್ಕೆ ಕಲ್ಯಾಣವಾಗಲೆಂತಲೂ, ಮತ್ತು ಪರಮಾತ್ಮನ ಅಂಶ ಸಂಭೂತರೂ ಸಾಧು-ಸತ್ಪುರುಷರೂ ಮಹಾಮಹಿಮಾಶಾಲಿಗಳೂ ಆಗಿ ಹೋದವರ ಪುಣ್ಯಸ್ಮೃತಿಯನ್ನು ಪ್ರತಿವರ್ಷ ಮಾಡುವ ಅವಶ್ಯಕತೆಯನ್ನೂ ಅವರ ವಿಧಿ-ವಿಧಾನಗಳನ್ನು ಜನತೆಗೆ ತಿಳಿಪಡಿಸುವದಕ್ಕಾಗಿಯೂ ಶ್ರೀ ಶಿವಪ್ಪಯ್ಯನವರ ಆರಾಧನೆಯನ್ನು ಪುಣ್ಯಮೂರ್ತಿಯರಾದ ತ್ರಿವೇಣ್ಯಮ್ಮನವರ ನೇತೃತ್ವದಲ್ಲಿಯೂ ಬಾಲಕ ಮಹಾದೇವಪ್ಪಯ್ಯನವರ ಹಸ್ತಸ್ಪರ್ಶದಿಂದಲೂ ಪ್ರತಿವರ್ಷ ಕಾರ್ತಿಕ ಕೃಷ್ಣ ಅಮಾವಾಸ್ಯೆಯ ದಿವಸ ನಡೆಯುವಂತೆ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿ ಪ್ರಾರಂಭ ಮಾಡಿದರು. ಅದರಂತೆಯೇ ಶ್ರೀ ಮಹಾದೇವಪ್ಪಯ್ಯನವರು ಭಾದ್ರಪದ ಶುದ್ಧ ಬಿದಿಗೆಗೆ ಶ್ರೀ ಬಿಷ್ಟಪ್ಪಯ್ಯನವರ ಆರಾಧನೆ ಪ್ರಾರಂಭಿಸಿದರು ಸುಮಾರು ಎರಡುನೂರಾಐವತ್ತು ವರ್ಷಗಳ ಕಾಲ ಈ ಎರಡೂ ಆರಾಧನೆಗಳು ಅಬಾಧಿತವಾಗಿ ನಡೆದು ಬಂದಿವೆ. ಕಳೆದ ಸುಮಾರು ೩೦ ವರ್ಷಗಳ ಹಿಂದಿನ ಕಾಲದ ವರೆಗೆ ಈ ಆರಾಧನೆಗಳಿಗೆ ಸಾವಿರದ ಸಂಖ್ಯೆಯಲ್ಲಿ ಎಣಿಸುವಷ್ಟು ಭಕ್ತ ಜನರು ಕೂಡುತ್ತಿದ್ದರು. ಆರಾಧನೆಗಳೆಂದರೆ ಸಾಂಘಿಕವಾಗಿ ಶ್ರದ್ಧಾಂಜಲಿ ಸಮರ್ಪಿಸುವದು. ಅಂತೆಯೇ ಅಷ್ಟು ಜನರು ಸೇರುತ್ತಿದ್ದರು. ಇತ್ತೀಚಿಗಿನ ಕಾಲದಲ್ಲಿ ಆ ಮನೆತನಕ್ಕೆ ಕಾಲನ ಅವಕೃಪೆ ಆದದ್ದರ ಮೂಲಕ ಮಧ್ಯೆ ಕೆಲವು ಕಾಲ ಈ ಆರಾಧನೆಗಳು ಸಂಕುಚಿತವಾಗಿ ಜರುಗಿದವಾದರೂ ಸ್ಥಗಿತವಾಗಲಿಲ್ಲ ಈಗ ಪುನರುಪಿ ೧೫-೨೦ ವರ್ಷಗಳ ಹಿಂದಿನಿಂದ ಸುವ್ಯವಸ್ಥಿತವಾಗಿ ನಡೆಯುಹತ್ತಿವೆ. ಭಕ್ತ ಜನರಾದರೂ ತಕ್ಕಮಟ್ಟಿಗೆ ಸೇರಿ ಉತ್ಸಾಹದಿಂದ ಕಾರ್ಯಮಾಡಿ ಆರಾಧನೆಗೆ ಶೋಭೆಯನ್ನುಂಟುಮಾಡುತ್ತಾರೆ. ಇಷ್ಟು ದೀರ್ಘಕಾಲ ತಪ್ಪದೇ ಆರಾಧನೆ ಪ್ರತಿವರ್ಷ ನಡೆಯುತ್ತ ಬಂದುದಾದರೂ ಆ ಯೋಗಿವರ್ಯರ ಮಹಿಮಾ ಪ್ರಭಾವವೆಂದೇ ತಿಳಿಯಬೇಕು.

ಈ ಆರಾಧನೆಗಳಲ್ಲದೇ ಮಾರ್ಗಶೀರ್ಷ ಶುದ್ಧ ಪೂರ್ಣಿಮೆಯ ದಿವಸ ಶ್ರೀ ಮಹಾಲಿಂಗೇಶನಿಗೆ ಅನೇಕ ತರಹದ ಹಣ್ಣುಗಳಿಂದ ಫಲ-ಪೂಜೆ ಕಟ್ಟುತ್ತಾರೆ. ಈ ಉತ್ಸವವು ಶ್ರೀ ಗೋಪುರದಮ್ಮನ (ಶ್ರೀ. ಲಕ್ಷ್ಮ್ಯಂಬೆಯವರ) ಸ್ಮೃತಿಗಾಗಿ ಮತ್ತು ಅವರಿಂದ ಪ್ರಸಾದಪಡೆಯಬೇಕೆಂದು ಮಾಡುತ್ತಾರೆ. ಎಂದು ಹೇಳಲಾಗುತ್ತದೆ. ಇದೇ ಪ್ರತಿಹುಣ್ಣಿಮೆಗೂ ಶ್ರೀ ಗೋಪುರದಮ್ಮ

ನವರ ಪ್ರೀತ್ಯರ್ಥವಾಗಿ ಸುವಾಸಿನಿಯರ ಸತ್ಕಾರ ಭೋಜನಾದಿಗಳು ಜರುಗುತ್ತವೆ. ಪ್ರತಿವರ್ಷ ಶ್ರಾವಣದಲ್ಲಿ ಶ್ರೀ ಮಹಾಲಿಂಗೇಶನಿಗೆ ನಿತ್ಯ ರುದ್ರಾಭಿಷೇಕ ಆಗುತ್ತದೆ. ಮಹಾ ಶಿವರಾತ್ರಿಗೆ ಅಭಿಷೇಕ ಮರುದಿವಸ ನೈವೇದ್ಯ ಬ್ರಾಹ್ಮಣ ಭೋಜನ ನಡೆಯುತ್ತದೆ. ಮಾರ್ಗಶೀರ್ಷ ಶುದ್ಧ ೪ ಗೆ ವಿನಾಯಕ ಪೂಜೆ, ನೈವೇದ್ಯ, ಬ್ರಾಹ್ಮಣ ಭೋಜನಾದಿಗಳು ಜರುಗುತ್ತವೆ. ಈ ಎಲ್ಲ ಉತ್ಸವಗಳು ವಿಠ್ಠಲಾಪುರದಲ್ಲಿ ಜರುಗುತ್ತವೆ.

ಶ್ರೀ ಬಿಷ್ಟೇಶರ ಎರಡನೇ ಅವತಾರವೇ ಅದ್ಭುತ ಮಹಿಮೆಗಳನ್ನು ತೋರಿಸಿ ಲೋಕ ಕಲ್ಯಾಣ ಮಾಡಿದ ಮುರಗೋಡದ ಶ್ರೀ ಗುರುಚಿದಂಬರ ಸ್ವಾಮಿಗಳೆಂತಲೂ ಮೂರನೇ ಅವತಾರವೇ ಅಗಡಿಯ (ಆನಂದವನದ) ಶ್ರೀ ಶೇಷಾಚಲ ಸದ್ಗುರುಗಳೆಂತಲೂ, ಭಕ್ತಜನರಲ್ಲಿ ಊಹಿಸಲಾಗುತ್ತದೆ. ಇನ್ನು ಹಿಂದೂ ಧರ್ಮದ ಪುನರುದ್ಧಾರಕ್ಕಾಗಿಯೇ ನಾಲ್ಕನೇ ಅವತಾರ ಆಗುವ ಸಮಯ ಈಗ ಬಂದಿದೆ. ಅದು ಹೇಗೆ, ಯಾವಾಗ, ಎಲ್ಲಿ ಎಂಬುದು ಆ ಪರಮಾತ್ಮನೇ ಬಲ್ಲ.

---

# ಪರಿಶಿಷ್ಟ ೧

## ಶ್ರೀ ಬಿಷ್ಟಪ್ಪಯ್ಯನವರ ಸ್ತೋತ್ರಗಳು

### ೧ ಶತನಾಮಸ್ತೋತ್ರ

ಶ್ರೀ ಗಣೇಶಾಯನಮಃ

ಬಿಷ್ಟೇಶಃ ಸತ್ಯಸಂಕಲ್ಪೋ | ಮಹಾದೇವ ಪಿತಾಮಹಃ |
ಅಷ್ಟಾಂಗಯೋಗ ನಿರತೋ | ಲಕ್ಷ್ಮೀಶಃ ಕುಡ್ಯವಾಹನಃ ||೧||

ಭಸ್ಮೋದ್ಧೂಲಿತ ಸರ್ವಾಂಗೋ | ಭಸ್ಮರಾಶಿ ಪ್ರದರ್ಶಕಃ ||
ಭಕ್ತಕಲ್ಯಾಣದಃ ಶಾಂತೋ | ತುಂಗಭದ್ರಾಕೃತಾಲಯಃ ೧ ||೨||

ಶಂಕರಾನಂದ ಸಚ್ಛಿಷ್ಯಂ | ಶಿವತಾತಸ್ತಪೋನಿಧಿಃ ||
ಮಹಾಗೋಪುರ ನಿರ್ಮಾಣಃ ೨ | ಚತುರಶ್ಚಾರೂವಿಗ್ರಹಃ ||೩||

ವಶೀಕೃತೇಂದ್ರಿಯಗ್ರಾಮೋ | ವಟಕೋಟರ ಮಂದಿರಃ ||
ಶಿವಗಂಗಾ ವೃತ್ತ್ಯಹರೋ | ಲೋಕಾನುಗ್ರಹಕಾರಣಃ ||೪||

ವಿಚಿತ್ರತರ ಚಾರಿತ್ರಃ | ತಿಂತ್ರಿಣೀದೋಹ ಪಂಡಿತಃ ||
ಬದ್ಧಪದ್ಮಾಸನಾಸೀನೋ | ನಾಸಾಗ್ರನ್ಯಸ್ತಲೋಚನಃ ||೫||

ಸದೇಹ ಸ್ವರ್ಗಸಂಧಾತಾ | ಶಾಂತಮೂರ್ತಿತನೂಭವಃ ||
ಸತ್ಯವಾಗ್ಧರ್ಮ ನಿಪುಣೌ | ಲೀಲಾಮಾನುಷ ವೇಷಧೃಕ್ ||೬||

ಜಟಾಜೂಟ ಪರೀತಾಂಗಃ | ಕುಸುಂದ ಚಲನಕ್ಷಮಃ ||
ಮಹಾಲಿಂಗಾನ್ವಿತಕರೋ | ಮಹಾಲಿಂಗ ಪ್ರಪೂಜಕಃ ||೭||

ಅಂಧದೃಷ್ಟಿಪ್ರದೋಯೋಗೀ | ದೇವಯೋನಿರ್ವಿಮುಕ್ತಿದಃ ||
ದವಾನಲ ಭಯತ್ರಾತಾ | ದುಃಖದಾರಿದ್ರ್ಯಭಂಜಕಃ ||೮||

---

(೧ ಧಡಾಲಯಃ ೨ ನಿರ್ಮಾತಾ ಹೀಗೆ ಇರುವದು ಸರಿದೋರುತ್ತದೆ.)

ನಾಗೇಂದ್ರದರ್ಪದಲನೋ । ವಿಶ್ವರೂಪ ಪ್ರದರ್ಶಕಃ ॥
ರುದ್ರಾಕ್ಷಮಾಲಾಭರಣಃ । ತುಂಗಾತೋಯಕೃತಾಜ್ಯಕಃ ॥೯॥
ಹನುಮತ್ಪ್ರಿಯ ಮಿತ್ರಶ್ಚ । ಜರಾ ಮರಣವರ್ಜಿತಃ ॥
ಭವಾಬ್ಧಿ ತಾರಕೋ ಮೌನಿ । ಸೋತ್ತರೀಯ ಕೃತಪ್ಲವಃ ॥೧೦॥
ಪರಲೋಕ ಸಮಾಸೀನಃ । ಸೋದರೋ ಮಾತೃವತ್ಸಲಃ ॥
ದ್ವಿಜಬಾಲಕದತ್ತಾಯುಃ । ಕಲೀಕಲ್ಮಷನಾಶಕಃ ॥೧೧॥
ವಂಧ್ಯಾಸಂತಾನ ಫಲದಃ । ಖರಚಾಪವಿಮೋಚಕಃ ।
ಸುವರ್ಣವರ್ಷಣೋ ಯೋಗೀ । ಪ್ರಾಣಾಯಾಮಪರಾಯಣಃ ॥೧೨॥
ಅದಗ್ಧ ತನುರಕ್ಲೇದ್ಯೋ । ಮಲ್ಲಣಾದ್ರಿ ನಿಕೇತನಃ ।
ಬ್ರಹ್ಮದತ್ತ ಚಿರಾಯುಷ್ಯೋ । ಸರ್ವವಿದ್ಯಾವಿಶಾರದಃ ॥೧೩॥
ವೇಶ್ಯಾಂಪುಂಭಾವಗಮಿತಾ । ಕಾಮಕ್ರೋಧ ವಿವರ್ಜಿತಃ ॥
ವ್ಯಾಘ್ರಾರ್ತ ಗೋಗಣತ್ರಾತಾ । ಸಮಾಧಿನಿರತೋವಶೀ ॥೧೪॥
ತೃಣನಿರ್ಜಿತಕೈರಾತೋ । ಕೈಲಾಸಗಿರಿದರ್ಶಕಃ ॥
ಸಂಸ್ತಂಭಿತ ಮಹಾವರ್ಷೋ । ಸಾಧುವೃಂದ ನಿಷೇವಿತಃ ॥೧೫॥
ತರುಣಾದಿತ್ಯ ಸಂಕಾಶಃ । ತಪಸ್ವೀ ತಾಪಸಪ್ರಿಯಃ ॥
ಅನ್ನಪೂರ್ಣಾಸಹಾಯಶ್ಚ । ಹ್ಯಕ್ಷಯಾನ್ನಪ್ರದಃ ಕವಿಃ ॥೧೬॥
ಜಿತ ನಿದ್ರೋ ಜಿತಾಹಾರೊ । ಜಗದಾರ್ತಿ ನಿಬರ್ಹಣಃ ॥
ರಂಗಾಪುರ ನಿವಾಸಶ್ಚ । ರಾಮೇಶಾಲಯ ದರ್ಶಕಃ ॥೧೭॥
ವೇಣುಪಲ್ಲಿ ಮಹಾಕ್ಷೇತ್ರ । ಜೀರ್ಣೋದ್ಧಾರ ವಿಶಾರದಃ ॥
ವಿರುಪಾಕ್ಷೈಕ ನಿಷ್ಠಾತ್ಮಾ । ವಾಮಕುಕ್ಷಿ ವಿಮೋಕ್ಷಕಃ ॥೧೮॥
ಧರ್ಮಸಂಸ್ಥಾಪಕಃ ಸಾಧು । ಜಗತ್ತ್ರಾಣಪರಾಯಣಃ ॥
ಸೇನಾಪತಿ ಪ್ರಾಣದಾತಾ । ಬ್ರಹ್ಮಣ್ಯೋ ಬ್ರಹ್ಮವಿತ್ಪ್ರಿಯಃ ॥೧೯॥
ದುಷ್ಟಗರ್ವವಿನೀತಾಚ । ವೃತ್ತಿಹೇರಂಭ ಭೋಜಕಃ ॥
ಸದಾ ಸಂತುಷ್ಟ ಸಚ್ಚಿತಃ । ಕುಷ್ಠರೋಗ ನಿವಾರಕಃ ॥೨೦॥

ಕುಲಾ ಸಂಧಾನ ನಿಪುಣೋ । ದ್ವಂದ್ವಾತೀತೊ ವಿಮತ್ಸರಃ ॥
ಭುಕ್ತಿಮುಕ್ತಿಪ್ರದೋದಾಂತೋ । ಅತ್ರಿಗೋತ್ರ ಸಮುದ್ಭವಃ ॥೨೧॥
ಏತಾನಿ ಶತನಾಮಾನಿ । ಬಿಷ್ಟೇಶಸ್ಯ ಮಹಾತ್ಮನಃ ॥
ತ್ರಿಕಾಲಂ ಪಠೇನ್ನಿತ್ಯಂ । ಭಕ್ತಿಮುಕ್ತಿಂಚ ವಿಂದತಿ ॥೨೨॥

ಟೀಪು:— ಈ ಶತನಾಮಾವಳಿಯು ಶ್ರೀಬಿಷ್ಟೇಶಚರಿತ್ರದ ರೂಪಕ ವಿದ್ದಂತಿದೆ. ಹಿಂದೆ ಬರೆಯಲಾದ ಅವರ ಚರಿತ್ರೆಯಲ್ಲಿ ಇಲ್ಲದ ಕೆಲವು ಸಂಗತಿಗಳು ಈ ಶತನಾಮ ಸ್ತೋತ್ರದಲ್ಲಿ ಬಂದಿವೆ. ಮೇಲಿಂದ ಅವರ ಚರಿತ್ರವು ಪೂರ್ತಿಯಾಗಿ ಇದ್ದದ್ದು ನಮಗೆ ದೊರೆತಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಅದಕ್ಕೆ ಉಪಾಯವಿಲ್ಲ.

## ೨. ಶ್ರೀ ಬಿಷ್ಟೇಶ ಪಂಚಸ್ತೋತ್ರಗಳು

### ಶ್ರೀ ಮಹಾದೇವಪ್ಪಾರ್ಯ ವಿರಚಿತ

**ಶ್ರೀ ಗಣೇಶಾಯನಮಃ**

ತ್ವದಾಜ್ಞಯಾಹಂ ನಿರೂಪಾಧಿಕೋಽಸ್ಮಿ ।
ವಿದ್ಯಾಮಯೋ ದೇಹಗತೋಽಪಿ ಯೋಗಿ ॥
ಪ್ರಲ್ಹಾದಬದ್ಧೋ ತವ ಪಾದ ಪದ್ಮೇ ।
ನಮಾಮಿ ನಿತ್ಯಂ ಶಿವರೂಪಮಸ್ಮಿ ॥೧॥

ತ್ವಯಾಶ್ರಯಾಸೌ ನಿಜವೃತ್ತಿದಾತಾ ।
ನಿರ್ಮಾಯ ಸಂಸಾರಮಪ್ರವಿಷ್ಟಾ ॥
ಮಾಯಾಂ ನಿರಾಕೃತ್ಯ ವಸಾಮಿ ಶಂಭೋ ।
ತ್ವದಾಜ್ಞಯಾಹಂ ಶಿವರೂಪಮಸ್ಮಿ ॥೨॥

ನಾರಾಯಣೋಽಹಂ ಗುರುದೇವತಸ್ಮಾ ।
ಮಹಾನುಭಾವಃ ಸ್ವಸುಖಪ್ರಬೋಧ ॥
ದೇಹಾದಿ ಸಂಸಾರ ನಿವೃತ್ತಿಜಾತಂ ।
ತ್ವದಾಜ್ಞಾಹಂ ಶಿವರೂಪಮಸ್ಮಿ ॥೩॥

ಶ್ರೀ ಸಾಂಬಶಂಭೋ ಗುರು ಬಿಷ್ವಮೂರ್ತೇ ।
ಮಹಾವಿಭೂತೆ ಸ್ವಸುಖಪ್ರದಾತಃ ॥
ಮಾಮುದ್ಧರತ್ವಂ ನಿಜಲಾಭಪೂರ್ಣಂ ।
ತ್ವದಾಜ್ಞಯಾಹಂ ಶಿವರೂಪಮಸ್ಮಿ ॥೪॥

ಗುರೂಗುರ್ರೂಣಾಂ ನಿಖಿಲಾರ್ಥದಾತಾ । (ಭಾವಃ)
ನಾರಾಯಣೋ ದೇವಋಷಿಪ್ರಕಾಶಃ ॥
ವೇದಾಂತವೇದ್ಯೋಽತಿ ಭಯಾಪಹಾರೀಮ್ ।
ಮಾಂ ಪಾಹಿ ಸಂಸಾರ ಭಯಾಪಜಸ್ರ ॥೫॥

ಇತಿ ಶ್ರೀಮತ್ಸತ್ಪುರುಷಾರ್ಯವರ್ಯ ಪದವಾಕ್ಯ ಪ್ರಮಾಣ
ಶ್ರೀ ಮಹಾದೇವಪ್ಪೈಯ್ಯಾರ್ಯ ವಿರಚಿತ
ಬಿಷ್ಟೇಶ ಪಂಚರತ್ನ ಸ್ತೋತ್ರಂ ಸಂಪೂರ್ಣಂ.

---

ಕಾಶೀ ಲಕ್ಷ್ಮಣಶಾಸ್ತ್ರಿ ವಿರಚಿತ

## ಬಿಷ್ಟೇಶ ಪಂಚರತ್ನ

ಶ್ರೀ ಗಣೇಶಾಯ ನಮಃ

ಶ್ರೀಮದ್ಬಿಷ್ವಪ ಶಾಂತಿ ಶಕ್ತಿ ತನಯಂ ।
ಪಂಪಾಧಿವಾಸಂ ಸದಾ ।
ಬ್ರಹ್ಮಾನಂದ ಸುಖೈಕ ಗಮ್ಯಮಮಲಂ ।
ಕಾರುಣ್ಯದೇಹಂ ಗುರುಂ ॥
ಭಕ್ತಾರ್ತಿಪ್ರಶಮೈಕಸೌಖ್ಯನಿಲಯಂ
ರಂಗಾಪುರೇ ಸಂಸ್ಥಿತಾಂ ।
ಸಾಕ್ಷಾತ್ತಂ ಶಿವರೂಪಮಿತ್ಯನುದಿನಂ ।
ಶ್ರೀ ಬಿಷ್ವಮೂರ್ತಿಂ ಭಜೆ ॥೧॥

ಶ್ರೀಮತ್ತೀರ್ಥ ವಿಭೂತಿಧೂಲಿನವಶಾ
ಜ್ಜನ್ಮತ್ರಯೋಪಾರ್ಜಿತಂ ॥
ಪಾಪಂ ನಶ್ಯತಿ ಸತ್ಯನಿತ್ಯನುದಿನಂ
ವಿಪ್ರೈರ್ವರ್ಯದಾ ಸೇವ್ಯತಾಂ ॥
ಯತ್ತದ್ವ್ಯಾಧಿ ಶತ್ಕೈಕ ಮೂಲಧನಂ
ಯೋಗೀಪತಿಂ ಯೋಗಿನಂ ॥
ಸಾಕ್ಷಾತಂ ಶಿವರೂಪಮಿತ್ಯನುದಿನಂ
ಶ್ರೀ ಬಿಷ್ಟಮೂರ್ತಿಂ ಭಜೆ ॥೨॥

ಶ್ರೀಮಂತಂ ಚತುರಾನನಾದಿ ಮುನಿಭಿಃ ॥
ಸಂಸ್ತೂಯಮಾನಂ ಗುರುಂ ॥
ಜೀವನ್ಮುಕ್ತಿಮಸಂಶಯಂ ಶಿವ ಇತಿ
ಪ್ರತ್ಯಕ್ಷನಾನಾ ಗುರುಃ ॥
ಸರ್ವಜ್ಞನಚ ಪೌತ್ರಕೇಣ ನಗರಿ ।
ತುಂಗಾ ತಟೇ ನಿರ್ಮಿತಾಂ ॥
ಸಾಕ್ಷಾತಂ ಶಿವರೂಪಮಿತ್ಯನುದಿನಂ ।
ಶ್ರೀ ಬಿಷ್ಟಮೂರ್ತಿಂ ಭಜೆ ॥೩॥

ಲೋಕೋದ್ಧಾರಕ ಲೀಲಯಾ ಕಲಿಯುಗೆ ।
ಸಂಪಾಪತೇದ್ವಾರ್ಯಯಾ ॥
ಧೀಮದ್ಗೋಪುರ ಧಾರಣಂಚ ಕೃತವಾನ್ ।
ಯಸ್ತತ್ರಲೋಕೋತ್ತರಾಂ ॥
ಪ್ರತ್ಯಕ್ಷಂ ವಟವೃಕ್ಷ ಮಧ್ಯಜಪಿತೋ ।
ಮೋಕ್ಷಾದಿ ಸಿದ್ಧಿಪ್ರದಃ ॥
ಸಾಕ್ಷಾತಂ ಶಿವರೂಪಮಿತ್ಯನುದಿನಂ ।
ಶ್ರೀ ಬಿಷ್ಟಮೂರ್ತಿಂ ಭಜೆ ॥೪॥

ಗಂಗಾತೀರ ವಿಶೇಷ ರಂಗನಗರಿ ।
ತುಂಗಾಧಿವಾಸಂ ಮಹಾ ॥
ಲಿಂಗಂ ಯೇನಕೃತಂ ಭವಾರ್ತಿಹರಣಂ ।
ಭೂದ್ದೇವ ಪೂಜ್ಯೇಷ್ಟದಂ ॥
ತಲ್ಲಿಂಗಂ ಪ್ರಿಯ ಬಿಲ್ವಪತ್ರಕುಸುಮೈ ।
ರರ್ಚಂ ತಮಾರ್ಯಂ ಗುರುಂ ॥
ಸಾಕ್ಷಾತಂ ಶಿವರೂಪಮಿತ್ಯನುದಿನಂ ।
ಶ್ರೀಬಿಷ್ಟಮೂರ್ತಿಂ ಭಜೆ ॥೫॥

ಇತಿ ಶ್ರೀ ಲಕ್ಷ್ಮಣ ವಿರಚಿತ ಬಿಷ್ಟೇಶ ಪಂಚರತ್ನ ಸ್ತೋತ್ರಂ ॥

## ೩. ಶ್ರೀ ಬಿಷ್ಟೇಶಾಷ್ಟಕಗಳು

### ಅಥ ಚೊಕನಾಥ ವಿರಚಿತ ಬಿಷ್ಟಪ್ಪದೇಶಿಕ ವರಾಷ್ಟಕ ಸ್ತೋತ್ರ

ದೃಷ್ಟಾತ್ರ ತತ್ವ ವಿಭವಂ ಜಗದೈಕವಂದ್ಯಂ ।
ದೃಷ್ಟಾಂತ ಶೂನ್ಯ ಚರಿತಂ ಮಹತಾಂ ಜನಾನಾಂ ॥
ಇಷ್ಟಪ್ರದಾನ್ವರಮಾಷ್ಟಕ ತನು ಸ್ವರೂಪಂ ।
ಬಿಷ್ಟಪ್ಪದೇಶಿಕ ವರಂ ಸತತಂ ಭಜೇಹಂ ॥೧॥

ವಿಶ್ವಾಸಭಾರವಿನುತ ಕ್ಷಿತಿಪಾಲಜಾಲೈಃ ।
ಕೋಟೀರಕೋಟಿ ವಿಲಸಂ ಮಪಿಕಾಂತಜಲೈಃ ॥
ನೀರಾಜಿತಾಂಘ್ರ್ಯೈಕಮಲಂ ವ ಹಿಮಾಪ್ರಭಾವಂ ।
ಬಿಷ್ಟಪ್ಪದೇಶಿಕವರಂ ಸತತಂ ಭಜೇಹಂ ॥೨॥

ಯತ್ಪಾದ ಪಂಕಜ ಪರಾಗ ವಿನಿಪ್ರತ್ಸ್ವಮಂ ।
ಬುಪಾತ್ರೇ ನಿಧಾಯ ಭವನೇವನೇರ್ಚಯಂತಿ ॥
ಭಕ್ತ್ಯೈಚನಾಸ್ತಮ ಸಮಾನ ವಿರಕ್ತಿಭಾಜಂ ।
ಬಿಷ್ಟಪ್ಪದೇಶಿಕವರಂ ಸತತಂ ಭಜೇಹಂ ॥೩॥

ಉದ್ಯದ್ದಯಾರಸತತ್ತಮ ನಿರಾಜ ತಂಗಂ |
ವಿಶ್ವಾಯತಿ ಶಾಯತಿ ಚಿತ್ರವಿಚಿತ್ರ ರಂಗಂ ||
ಸಂಪಾಧಿನಾಥ ಪದಪಂಕಜಲೋಲ ಭೃಂಗಂ |
ಬಿಷ್ಟಪ್ಪದೇಶಿಕ ವರಂ ಸತತಂ ಭಜೇಹಂ ||೪||

ಸಂಸಾರಸೌಖ್ಯಮಖಿಲ ತೃಣವದ್ವಿಧಾಯ |
ಲಬ್ಧಾ ಕುಮಾರ ಸದೃಶಂ ಮನನಃ ಕುಮಾರಂ ||
ಯಸ್ತುರ್ಯಮಾಶ್ರಮಮುಪೇತ್ಯ ನಿರಾಜತೇತುಂ |
ಬಿಷ್ಟಪ್ಪದೇಶಿಕ ವರಂ ಸತತ ಭಜೇಹಂ ||೫||

ಮಧ್ಯಾಹ್ನ ಭಾಸ್ಕರ ವಿಭಾಸಿತ ದಿವ್ಯದೇಹಂ !
ಸ್ವಾಂಘ್ರಿದ್ವಯಂ ಪ್ರಣೀತ ನಾನತ್ರ ಭವ್ಯದೇಹಂ ||
ಔದಾರ್ಯ ಧೈರ್ಯಮುಖ ಸದ್ಗುಣ ಜನ್ಮಗೇಹಂ |
ಬಿಷ್ಟಪ್ಪದೇಶಿಕ ವರಂ ಸತತಂ ಭಜೇಹಂ ||೬||

ಯೋಮಾಬಲಂ ವಿಶಿಖಿದಾಂಗ್ರಮನನ್ಯಸಾಧ್ಯಂ |
ಸಂಪಾಧಿಸಾಲ ವಿಬಿಭೂಷಣಮುಚ್ಚ್ಯಹರ್ಮ್ಯಂ ||
ಯೋಲೀಲಯಾ ವಿವಿದಧೆತಮಸಿ ಪ್ರಸಿದ್ಧಂ |
ಬಿಷ್ಟಪ್ಪದೇಶಿಕ ವರಂ ಸತತಂ ಭಜೇಹಂ ||೭||

ಸಂಧ್ಯಾವಿದಾತ್ರ ಲಿಖಿತಂ ಲಿಪಿಮಾತ್ಮಭಾಲಂ |
ಯುದ್ಧತ್ವಿಭೂತಿಕಣಲೇಪನ ಲೋಪಮೃಜ್ಯಃ ||
ಅಂಕೇಸಿಧಾಯ ತನಯಂ ಮುದಮಶತೇತಂ |
ಬಿಷ್ಟಪ್ಪದೇಶಿಕ ವರಂ ಸತತಂ ಭಜೇಹಂ ||೮||

ಬಿಷ್ಟಪ್ಪದೇಶಿಕ ವರಾಷ್ಟಕಮಿಷ್ಟದಂ ಯೋ |
ನಿತ್ಯಂ ಪ್ರಭಾತ ಸಮಯೇ ಪಠತಿ ಪ್ರಸಿದ್ಧಃ ||
ಭುಕ್ತ್ವಾ ತದೀಯ ಕೃಪಯೇ ಹಸಮಸ್ತ ಭೋಗಾನ್ |
ಅಂತೇಚ ಮುಕ್ತಿಮಧಿಗಚ್ಛತಿ ಶುದ್ಧಸತ್ವಃ ||೯||

## ಆಪಟಿ ಅನಂತರಾಯ ವಿರಚಿತ

# ಬಿಷ್ಟೇಶಾಷ್ಟಕ

## (ಕನ್ನಡ)

ಪ್ರತ್ಯಕ್ಷ ವಿರುಪಾಕ್ಷ ಶಿಶುವಾಗಿ ಬಂದೆ ।
ಅಪ್ಪಯ್ಯ ಜೋಯಿಸರಿಗೆ ಮಗನಾಗಿ ಬೆಳೆದೆ ॥
ನೀ ಬಾಲಯೋಗಿ ಸ್ವಯಮೇವ ಜ್ಞಾನಿ ।
ನಮಿಸುವೇ ದೇವಾ ಗುರು ಬಿಷ್ಟಪಾರ್ಯಾ ॥೧॥

ಪಾದುಕೇ ಬೆತ್ತಗಳ ಶಿವನಿಂದ ಪಡೆದೆ ।
ಭೇದೀಸಿ ದ್ವಾರವ ಹೊರ ಸಾಗಿ ನಡೆದೆ ॥
ದ್ವಾದಶ ವರ್ಷವ ತಪವನು ಗೈದೆ ।
ನಮಿಸುವೇ ದೇವಾ ಗುರು ಬಿಷ್ಟಪಾರ್ಯಾ ॥೨॥

ಸಿದ್ಧೀಯ ಪಡೆದಾಗ ಸೋಗಿಗೆ ಬಂದೆ ।
ತಿಂತ್ರೀಣಿ ವೃಕ್ಷದಿ ಕ್ಷೀರವ ಕರೆದೆ ॥
ಗಳಿಗೇಯ ನಡೆಸೀದಿ ಬಹು ಲೀಲೆಯಿಂದ ।
ನಮಿಸುವೇ ದೇವಾ ಗುರು ಬಿಷ್ಟಪಾರ್ಯಾ ॥೩॥

ಪರ್ವತದ ಶಿಲೆಯನ್ನು ದ್ರವಿಸೀದಿ ಕ್ಷಣದಿ ।
ಭಸ್ಮದ ರಾಸೀಯ ಜನಕಾಗಿ ತೋರೀದಿ ॥
ಪಾಪಿಗಳೆಲ್ಲರನು ಉದ್ಧರೀಸಿದೆ ।
ನಮಿಸುವೇ ದೇವಾ ಗುರುಬಿಷ್ಟಪಾರ್ಯಾ ॥೪॥

ಭಸ್ಮದ ಮಹಿಮೇಯ ಮಾಧ್ವರಿಗೆ ತೋರಿದೆ ।
ರಾಮೇಶ ದೇಗುಲವನೀ ಹೊರಗೆ ತೆಗೆದೆ ॥
ವಿಠ್ಠಲ ಮೂರ್ತೀಯ ನೀ ಸ್ಥಾಪಿಸೀದೆ ।
ನಮಿಸುವೇ ದೇವಾ ಗುರುಬಿಷ್ಟಪಾರ್ಯಾ ॥೫॥

ಬೀದರಹಳ್ಳಿ ಕ್ಷೇತ್ರವ ಪಾವನಗೈದೆ ।
ತೀರ್ಥಾಷ್ಟಕಂಗಳನು ನೀ ಸ್ಥಾಪಿಸೀದೆ ॥
ಕಾಸೀಗೆ ಸಮವಾದ ಕ್ಷೇತ್ರವ ಗೈದೆ ।
ನಮಿಸುವೇ ದೇವಾ ಗುರು ಬಿಷ್ಟಪ್ಪಾರ್ಯ ॥೫॥

ಹಂಪೀಯ ಗೋಪುರವ ಆರಂಭಿಸೀದೆ ।
ಸತೀ ಲಕ್ಷ್ಮ್ಯಂಬೆಗೆ ಆಹುತೀಯ ಕೊಟ್ಟೆ ॥
ನೆಲೇ ಹನ್ನೊಂದರ ಗೋಪುರವ ಸೇರಿಸೀದೆ ।
ನಮಿಸುವೇ ದೇವಾ ಗುರು ಬಿಷ್ಟಪ್ಪಾರ್ಯ ॥೬॥

ಭಾದ್ರಪದದಾ ಬಿದಿಗೀಯ ದಿನದಿ ।
ಹೊರ ಸಾಗಿ ನಡೆದೆ ನಿಜಕ್ಷೇತ್ರದೆಡೆಗೆ ॥
ನೀ ಲೀನನಾದೆ ನಿಜ ರೂಪದಲ್ಲಿ ।
ನಮಿಸುವೇ ದೇವಾ ಗುರು ಬಿಷ್ಟಪ್ಪಾರ್ಯ॥ ॥೭॥

ಬಿಷ್ಟಾಷ್ಟಕಮಿದಂ ದಿನ ನಿತ್ಯದಲ್ಲಿ ।
ಪಠಿಸುವ ಭಕ್ತರಿಗೆ ನೀ ಪ್ರೇಮದಲ್ಲಿ ॥
ಇಷ್ಟಾರ್ಥಸಿದ್ಧೀಯ ಕೊಡು ದೇವಮುನಿಸಿಂಹ ।
ನಮಿಸೂವೇ ದೇವಾ ಗುರು ಬಿಷ್ಟಪ್ಪಾರ್ಯ ॥೮॥

ಇತಿ ಶ್ರೀ ಬಿಷ್ಟಪ್ಪಾರ್ಯ ಸ್ತೋತ್ರ ಸಮಾಪ್ತ

**॥ ಶ್ರೀ ಬಿಷ್ಟೇಶಾರ್ಪಣಮಸ್ತು ॥**

# ಪರಿಶಿಷ್ಟ ೨

## ಶ್ರೀ ಶಿವಪ್ಪಾರ್ಯ ಅಷ್ಟಕ ಸ್ತೋತ್ರ

ಶ್ರೀ ಗಣೇಶಾಯನಮಃ

ಸದಾ ತುಂಗಭದ್ರಾಪಗಾತೀರವಾಸಂ ।
ನಿಜಸ್ಯತ್ವಿಷಾಸಂಜಿತಾಂ ಭೋಜಭಾಸಂ ।
ಮಹಾಚಾರುವಾಸಂ ಲಸನ್ಮಂದಹಾಸಂ ।
ಶಿವಪ್ಪಾರ್ಯ ಬಾಲಂ ಭಜೇ ನಿತ್ಯ ಸರ್ವ ಕಾಲಂ ॥೧॥

ಸ್ಫುರದ್ರತ್ನರಾಜತ್ಕಿರೀಟಂ ದಧಾನಂ ।
ಜ್ವಲತ್ಕುಂಡಲ ದ್ವಂದ್ವ ಸಂಶೋಭಿಮಾನಂ ॥
ಲಸದ್ಧಾರಯುಷ್ಟಿ ಪ್ರಭಾಭಾಸಮಾನಂ ।
ಶಿವಪ್ಪಾರ್ಯಬಾಲಂ ಭಜೆ ನಿತ್ಯಕಾಲಂ ॥೨॥

ಮಹಾಧೈರ್ಯ ಗಾಂಭೀರ್ಯ ಚಾತುರ್ಯಮುಖ್ಯೈಃ ।
ಪ್ರಶಕ್ತೈಃ ಸಮಸ್ತೈರ್ಗುಣೈ ರಾಜಮಾನ್ಯಂ ॥
ಸದಾ ಪಂಡಿತೇದ್ಯಂ ಮಹಾವೈಭವಾಢ್ಯಂ ।
ಶಿವಪ್ಪಾರ್ಯಬಾಲಂ ಭಜೆ ಸರ್ವಕಾಲಂ ॥೩॥

ಮಹಾಶ್ಚರ್ಯ ಚರ್ಯಂ ಕೃತಾಸಾಧ್ಯಕಾರ್ಯಂ ।
ಮಹಾಯೋಗಿ ಧುರ್ಯಂ ಮಹಾದೇಶಿಕಾರ್ಯಂ ॥
ಮುನಿಸ್ತುತ್ಯಕೀರ್ತಿಂ ಮಹಾಶಾಂತ ಮೂರ್ತಿ ।
ಶಿವಪ್ಪಾರ್ಯಬಾಲಂ ಭಜೆ ಸರ್ವಕಾಲಂ ॥೪॥

ಭಜದ್ಭಕ್ತರೋಗಪ್ರಮತ್ತೇಭ ಸಿಂಹಂ |
ಭವಾಂಬೋಧಿನಾವು ಮಹಾದಿವ್ಯದೇಹಂ ||
ಸಮಸ್ತೇಷ್ಟದಾನೇ ಸಮರ್ಥಂ ನಿರೀಹಂ |
ಶಿವಪ್ಪಾರ್ಯಬಾಲಂ ಭಜೇ ಸರ್ವಕಾಲಂ ||೫||

ಮಹಾಪಾಪಿನೋಪಿ ಸ್ವಕೀಯಾಘಸಂಘೈಃ |
ವಿಮುಕ್ತಾಃ ಪವಿತ್ರಾನಿತಾಂತಂ ಭವಂತಿ ||
ಯದಿಯಾನು ಕೃಪಾಕಟಾಕ್ಷ ಪ್ರಭಾವಾತ್ |
ಶಿವಪ್ಪಾರ್ಯಬಾಲಂ ಭಜೇ ಸರ್ವಕಾಲಂ ||೬||

ಅಜಸ್ರಂ ನತಾನೇಕ ಭೂಪಾಲಜಾಲಂ |
ವಿರೂಪಾಕ್ಷಪಾದಾಂಬುಜ ದ್ವಂದ್ವಲೋಲಂ ||
ತ್ರಿವೇಣೀ ಸಮಾಸ್ಯಾಂಬಿಕಾ ವಾಕ್ಯಪಾಲಂ |
ಶಿವಪ್ಪಾರ್ಯ ಬಾಲಂ ಭಜೇ ಸರ್ವಕಾಲಂ ||೭||

ಕಿಯಂತೋ ಭಜಂತೇ ಸದೈಶ್ವರ್ಯ ಸಿದ್ಧ್ಯೈ |
ಕಿಯಂತೋ ಭಜಂತೇ ಮಹಾವೇಶ ವೃದ್ಧ್ಯೈ ||
ಕಿಯಂತೋ ಭಜಂತೇ ನರೋ ಮೋಕ್ಷಲಬ್ಧ್ಯೈ |
ಶಿವಪ್ಪಾರ್ಯ ಬಾಲಂ ಭಜೇ ಸರ್ವಕಾಲಂ ||೮||

ಭುಜಂಗ ಪ್ರಯಾತೇನ ವೃತ್ತೇನ ಬದ್ಧಂ |
ಶಿವಪ್ಪಾರ್ಯ ಬಾಲಾಷ್ಟಕಂ ಸ್ವೇಷ್ಟದಂ ಯಃ ||
ಪ್ರಬುದ್ಧಃ ಪ್ರಭಾತೇ ಪಠೇದ್ಭಕ್ತವರ್ಯೋ |
ಲಭೇತಾಶು ಸಿದ್ಧಿಂ ಸಸರ್ವಾನಿಶಾಂತಂ ||೯||

ಇತಿ ಶ್ರೀ ಶಿವಪ್ಪಾರ್ಯಾಷ್ಟಕಂ ಸಂಪೂರ್ಣಂ ||

———

# ಪರಿಶಿಷ್ಟ ೩

## ಶ್ರೀ ಮಹಾದೇವಪ್ಪಾರ್ಯ ಪಂಚಗತ್ನ ಸ್ತೋತ್ರ

ಅಥ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ( ತತ್ಕಾಲೀನ )
ಶ್ರೀಮತ್ ಶಂಕರಾಚಾರ್ಯ ವಿರಚಿತ

**ಮಹಾದೇವಪ್ಪಾರ್ಯ ಪಂಚರತ್ನ ಸ್ತೋತ್ರ ಪ್ರಾರಂಭ**

ಚಿದಾಕಾರಂ ಸಾರಂ ಸಕಲಜಗತಾಂ ರಂಗನಗರೇ ।
ವಸಂತಂ ಪಾರ್ವತ್ಯಾ ಸಹ ವನಿತಯಾ ಚಿತ್ರಚರಿತಂ ॥
ಸ್ಫುರದ್ರೂಪಂ ಭೂತ್ಯೈರನುದಿನಮುಪಾಸ್ಯಾಂಘ್ರಿಕಮಲಂ ।
ಮಹಾದೇವಪ್ಪಾರ್ಯಂ ಮನಸಿಕಲಯೇ ಸದ್ಗುರುಂಮಹಂ ॥೧॥

ವದಂತ್ವನ್ಯೇಲೋಕಾಜಗತಿಬಹುಧಾ ಮೂಢಮತಯೋ ।
ವಿರೂಪಾಕ್ಷಃಸಾಕ್ಷಾದಿತಿ ಮನಸಿಮೇ ನಿಶ್ಚಿತಮಿದಂ ॥
ಮಹಾಲೀಲಾಮೂರ್ತಿಂ ಮಹಿತಗುರುಮಂಬಾಸಖಮಮುಂ ।
ಮಹಾದೇವಪ್ಪಾರ್ಯಂ ಮನಸಿಕಲಯೇ ಸದ್ಗುರುಂಮಹಂ ॥೨॥

ನರಾಕಾರಂ ಧೃತ್ವಾಜಗತಿ ಮನುಜಾನಾಂ ಕರುಣಯಾ ।
ಮಹಾದುಃಖಾರ್ತಾನಾಂ ಸಪದಿಮನಸಾದಾತುಮುಚಿತಃ
ಮಹೈಶ್ವರ್ಯಂ ಸತ್ವಂ ರವಿಸದೃಶಕಾಂತಿಂ ಗುಣನಿಧಿಂ ।
ಮಹಾದೇವಪ್ಪಾರ್ಯಂ ಮನಸಿ ಕಲಯೇ ಸದ್ಗುರುಮಹಂ ॥೩॥

ಪುರಾ ಕೈಲಾಸಾದ್ರೇರವಿಗಿರಿಜಯಾಸಾರ್ಧಮಧುನಾ ।
ಶ್ರಿಯಾಗೋಕರ್ಣೇಶಂ ಜಟಿತನಿತರಾಂ ದ್ರಷ್ಟುಮನಘಂ ॥
ಸಮೇತ್ಯೇದಂ ಕ್ಷೇತ್ರಂ ಮುದಿತ ಮನಸಂ ವಿಶ್ವನಿಲಯೇ ।
ಮಹಾದೇವಪ್ಪಾರ್ಯಂ ಮನಸಿ ಕಲಯೇ ಸದ್ಗುರುಮಹಂ ॥೪॥

ಮಹಾಪೂಜಾ ಲಿಂಗೇ ದ್ವಿಜತತಿಷು ಭುಕ್ತಿಃ ಪ್ರತಿದಿನಂ ।
ಘೃತೈರ್ಭಕ್ಷ್ಯೈರ್ಭೋಜ್ಯೈರ್ಮಧುರ ವಚಸಾ ಮಂದಹಸಿತಂ ॥
ಕಿಯಚ್ಚಿತ್ರಂ ವಕ್ಷ್ಯಂ ಚರಿತ ಮಧುನಾ ವಿಸ್ಮಯಕರಂ ।
ಮಹಾದೇವಪ್ಪಾರ್ಯಂ ಮನಸಿ ಕಲಯೇ ಸದ್ಗುರುಮಹಂ ॥೫॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ
(ತತ್ಕಾಲೀನ) ಶ್ರೀಮಚ್ಛಂಕರಾಚಾರ್ಯ ವಿರಚಿತ
ಶ್ರೀ ಮಹಾದೇವಪ್ಪಾರ್ಯ ಪಂಚರತ್ನಂ ಸಂಪೂರ್ಣಂ

——

### ಶ್ರೀ ಲಕ್ಷ್ಮಣಶಾಸ್ತ್ರಿ ವಿರಚಿತ

## ಶ್ರೀ ಮಹಾದೇವಪ್ಪಾರ್ಯಾಷ್ಟಕ

ಅಭೀಷ್ಟೇಷು ಕಾರ್ಯೇಷು ಬಿಷ್ಟಾಯಚಯಾ ।
ದರೀದೃಶ್ಯತೇ ಸಾಕುಮಾರ್ಯಸ್ಯಚಾಸ್ಯ ॥
ಸಪಿವ ಪ್ರಸಯೋ ಪಯಾ ವಾರ್ಧಿರೇವಂ ।
ಮಹಾದೇವ ಬಾಲೋ ಮಹಾನೇವ ಭಾತಿ ॥೧॥

ಸದಾಪ್ಯನ್ನದಾನಾವ ದಾನಪ್ರದಾನಂ । ಮುದಾಮತ್ಯುದಾರಂ ।
ಸದಾಲಂಬವೀರಂ ॥
ಮಹಾದೇವ ಸೇವಾದಿ ಖೇಲಾಯದೀಯಾ ।
ಮಹಾದೇವಬಾಲಂ ಮಹಾಂತಂತಮೀಡೆ ॥೨॥

ನಿಚ್ಚೈಃಕಾರಿತೇ ನಿರ್ಗತೋ ಗೋಪುರಶ್ರೀ ।
ವಿರೂಪಾಕ್ಷದೇವೋ ಮಹಾ ಸಂಭ್ರಮೇಣ ॥
ಯದಿಯಾನ್ನದಾನಾಬ ಲೀಲಾಪ್ರಹರ್ಷೀ ।
ಮಹಾದೇವ ಬಾಲೇನ ಕೋ ವಾಸಮಾನಃ ॥೩॥

ಶಿಶುತ್ವೇಪಿ ಚಿತ್ರೈಃ ಚರಿತ್ರೈಃ ಪವಿತ್ರೈಃ ।
ಯಥಾ ಬಾಲಕೃಷ್ಣೋ ಯಥಾ ವಾ ಕುಮಾರಃ ॥
ತಥಾ ಮಾನ್ಯಗಂಭೀರತಾ ಯಸ್ಯ ತಸ್ಮೈ ।
ಮಹಾದೇವ ಬಾಲಾಯ ನಿತ್ಯಂ ನಮೋಸ್ತು ॥೪॥

ಮಹೋತ್ಸಾಹ ಕಾರ್ಯೋ ಸಮಾರಾಧನದ್ ।
ಮಹಾವರ್ಷಕಾರೀ ಸಮಾಯಾತ ಮೇಘಃ ॥
ಧೃವಂದೂರ ಮುದ್ಧ್ರಿಯತೇ ಯಸ್ಯ ವಾಚಾ ।
ಮಹಾದೇವ ಬಾಲಾನ್ ಮಹಾನ್‌ಕೋಸ್ತಿ ಲೋಕೇ ॥೫॥

ಕಿಯಂತೋ ಮಹಾರೋಗದೋಷೈರ್ವಿಮುಕ್ತಾಃ ।
ಕಿಯಂತಃ ಸಮಾವಿಷ್ಟಭೂತೈರ್ವಿಮುಕ್ತಾಃ ॥
ಕಿಯಂತೋ ಭವಾರ್ತಿಂ ವಿಮುಂಚತಿ ಭಕ್ತಾನ್ ।
ಮಹಾದೇವ ಬಾಲಸ್ಯ ಕಿನ್ನಸ್ಯಸಾಧ್ಯಂ ॥೬॥

ನೃಪಾಣಾಂ ಕಿರೀಟಾಗ್ರರತ್ನೈರ್ನಿಘೃಷ್ಟಂ ।
ಪದಂ ಸಂದಂ ಸಂಪ್ರಿದಂತೇಯದೀಯಾ ॥
ಮಹಾದೇವ ಭಾತ್ರೀಕ ಕೈರ್ನಿತ್ಯನಮ್ರೇ ।
ಮಹಾದೇವ ಬಾಲೇ ಸ್ತುತೆಕಿನ್ನಸಾಧ್ಯಂ ॥೭॥

ದಯಾವಾರಿರಾಶಿಃ ಸ್ವಮಾಹಾತ್ಮ್ಯದರ್ಶೀ ।
ಗುಣಾನ್ಸೇವನಂ ವಾನವೇಕ್ಷ್ಯೈವಭಾಸೀ ॥
ತ್ರಿವೇಣ್ಯಂಬಿಕಾ ಗರ್ಭಸಿಂಧೂರಿವೇಂದೋ ।
ಮಹಾದೇವ ಬಾಲಸ್ತ್ವಮೇನಾಶ್ರಯೋಮೆ ॥೮॥

ವಿಭಕ್ತ್ಯೈಃ ಪ್ರಭೇದ್ಯೈರ್ವಿಭಕ್ತಾಃಪ್ರಶಸ್ತ್ಯೈ ।
ಮಹಾದೇವಬಾಲೇ ಮದಾಸಿದ್ಧ ಶಿಲೇ ॥
ಭುಜಂಗಾಷ್ಟಕಂ ಲಕ್ಷ್ಮಣೇನ ಪ್ರಣೀತಂ ।
ಪಠೇನ್ಯೋ ಲಭೇತ್ಯೈವ ಸದ್ಯಃ ಸಸಿದ್ಧಿಂ ॥೯॥

ಇತಿ ಶ್ರೀ ಲಕ್ಷ್ಮಣಶಾಸ್ತ್ರಿ ವಿರಚಿತ
ಮಹಾದೇವಪ್ಪಾರ್ಯಾಷ್ಟಕ ಸ್ತೋತ್ರ ಸಂಪೂರ್ಣಂ ॥

# ಉಪಸಂಹಾರ

ಈ ಯೋಗಿವರ್ಯತ್ರಯರ ಚರಿತ್ರವು ಸಂಸ್ಕೃತ ಶ್ಲೋಕ, ಕನ್ನಡ ಭಾಷೆಯಲ್ಲಿ ಕತೆ, ಪದ್ಯರೂಪ ಚರಿತ್ರೆ ಮತ್ತು ಬೇರೆ ಬೇರೆಯವರು ಮಾಡಿದ ಅವರ ಸ್ತೋತ್ರಗಳನ್ನೂ ಬರೆಯಲಾಗಿದೆ ಈ ಯೋಗಿತ್ರಯರು ಇನ್ನೂ ಅನೇಕ ಮಹಿಮೆಗಳನ್ನು ತೋರಿಸಿದ್ದಾರೆಂದು ಜನವಾಣಿಯಿಂದಲೂ ಅವರ ಸ್ತೋತ್ರ ಸಂಗ್ರಹಗಳ ಮೇಲಿಂದ ತಿಳಿದುಬರುತ್ತದೆ. ಆದರೆ ಅವಕ್ಕೆ ತಕ್ಕ ಆಧಾರಗಳಿಲ್ಲದ್ದರಿಂದ ಬರೆಯಲಾಗಲಿಲ್ಲ.

ತತ್ಕಾಲೀನ ಶ್ರೀಮಚ್ಛಂಕರಾಚಾರ್ಯರು ಮಹಾದೇವಪ್ಪಯ್ಯನವರಿಗೆ ೬೦ ಬಿರುದಾವಳಿಗಳನ್ನು ಕೊಟ್ಟರು ಅವುಗಳಲ್ಲಿ ಸಧ್ಯಕ್ಕೆ ರೂಢಿಯಲ್ಲಿ ಇರುವಂಥವುಗಳೆಂದರೆ ಛತ್ರಚಾಮರ, ಹಗಲುದೀವಟಿಗೆ, ಬೆನ್ನು ಮಣೆ ಮುಂತಾದವು ಮತ್ತು ಇವರ ಮನೆತನದ ಪತ್ರವ್ಯವಹಾರದಲ್ಲಿ ಕೆಳಗಿನಂತೆ ಒಕ್ಕಣಿಕೆ ಇದ್ದದ್ದು ಕಂಡುಬರುತ್ತದೆ.

" ಶ್ರೀಮತ್ಸತ್ಪುರುಷಾರ್ಯವರ್ಯಂ ಪದವಾಕ್ಯಪ್ರಮಾಣ ಪಾರಾವಾರ ಪಾರೀಣ ದುರೀಣ ಯಮ, ನಿಯಮಾಸನ, ಪ್ರಾಣಾಯಾಮ, ಪ್ರತ್ಯಾಹಾರ ಧ್ಯಾನ, ಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠತಪಃ ಚಕ್ರವರ್ತ್ಯನಾದ್ಯವಿದ್ಯಾ ವಿದ್ಯೋತಮಾನ, ಕಲಿಕಾಲ ಕಲ್ಮಷವಿದಲನ, ಪಟುತರ ಚಿತ್ರ, ವಿಚಿತ್ರ, ಚರಿತ್ರ, ಪವಿತ್ರೀಕೃತ ಧಾತ್ರೀವಲಯ ಶ್ರೀಮತ್ಪಂಪಾಧಿಪಾಲಯ; ನಿಭೂಷಣ, ಮಹಾ ಗೋಪುರ ಪ್ರತಿಷ್ಠಾಪಕ. ರಂಗಪುರವರಾಧೀಶ್ವರ, ತುಂಗಭದ್ರಾತೀರವಾಸ, ಶ್ರೀಮದಭಿನವ ವಹಾಪುರುಷ ಬಿಷ್ಟಪ್ಪಾರ್ಯ ಕುಲಕೌಸ್ತುಭ " ಈ ಪ್ರಕಾರ ಒಕ್ಕಣಿಕೆ ಇದ್ದದ್ದು ಕಂಡುಬಂದಿದೆ

ಈ ವಂಶದವರು ಇಂದಿಗೂ ತಮ್ಮ ಸರಂಜಾಮು ಬಿರುದಾವಳಿಗಳ ಸಹಿತ ಶ್ರೀಪಂಪಾವಿರೂಪಾಕ್ಷೇಶನ ದರ್ಶನಕ್ಕೆ ಹೋದರೆ ಗರ್ಭಾಗಾರದ ಪೂರ್ವದ್ವಾರವನ್ನು ತೆರೆದು ಸ್ವಾಗತಿಸಬೇಕೆಂದೂ ಜನಸಾಮಾನ್ಯರಿಗೆ ಇಲ್ಲದ್ದು ಈ ಮನೆತನಕ್ಕೆ ಇರುತ್ತದೆಂದೂ ಹೇಳಲಾಗುತ್ತದೆ. ಹಾಗೆ ಸನದು ಅದೆ. ಆದರೆ ಅದು ನೋಡಲಿಕ್ಕೆ ಸಿಗಲಿಲ್ಲ.

ಈ ಮನೆತನದ ಆರಂಭದ ಯೋಗಿತ್ರಯರು ಖ್ಯಾತಿವಂತರಾಗಿ ಬಾಳಿದ್ದರಿಂದ ಮುಂದೆ ವಂಶಪರಂಪರಾಗತವಾಗಿ ಕ್ರಮದಂತೆ ಇವೇ ಹೆಸರುಗಳಿಂದ ಕರೆಯಲಾಗುತ್ತದೆ. ಇದೊಂದು ಈ ವಂಶದವರ ವೈಶಿಷ್ಟ್ಯವೆಂದು ಹೇಳಬಹುದು ಅವರವರ ಪತ್ನಿಯರ ಹೆಸರಾದರೂ - ಲಕ್ಷ್ಮಮ್ಮಾ, ತ್ರಿವೇಣ್ಯಮ್ಮ ಮತ್ತು ಪಾರ್ವತೆಮ್ಮ ಈ ಕ್ರಮದಿಂದಲೆ ಕರೆಯಲಾಗುತ್ತದೆ. ಅದು ಹೀಗೆ

| ಪುರುಷರು | ಸ್ತ್ರೀಯರು |
|---|---|
| ಬಿಷ್ಟಪ್ಪಯ್ಯ | ಲಕ್ಷ್ಮಮ್ಮಾ |
| ಶಿವಪ್ಪಯ್ಯ | ತ್ರಿವೇಣ್ಯಮ್ಮ |
| ಮಹಾದೇವಪ್ಪಯ್ಯ | ಪಾರ್ವತೆಮ್ಮ |

---

## ಶ್ರೀ ಬಿಷ್ಟೇಶರಿಗೆ ಮಂಗಲ

### ಆಪಟೆ ಅನಂತರಾಯ ಕೃತ

ಜಯದೇವ ಜಯದೇವ ಜಯ ತಾಪಸವರ್ಯಾ ||
ಜಯತು ಕರುಣಾನಿಧಿ ಯೋಗೀ ಬಿಷ್ಟೇಶಾ ||ಪ|| ಜಯ

ಯೋನಿಜನಲ್ಲದಲೆ ಜಗದೀ ನೀ ಬಂದಿ |
ಮುನಿವರಪ್ಪಯ್ಯನ ವಂಶವುದ್ಧರಿಸಿದಿ ||
ಜನತೆಯ ಕಾಟಕ್ಕೆ ಕಾನನವ ಸೇರಿದಿ |
ಮನವನು ಗ್ರಹಿಸುತೆ (ತಪವನು) ಧ್ಯಾನವನ್ನೈದಿ ||೧|| ಜಯ

ಮತ್ತೆ ಕಿರಾತರಿಗೆ ಮಹಿಮೆಯ ತೋರಿದಿ |
ಚಿತ್ತದಿ ದ್ವಾರವ ಭೇದಿಸಿ ಬಂದಿ ||
ಮೃತ್ತಿಕೆ ತುಂಬಿದ ಗಳಿಗೆಯ ನಡೆಸಿದಿ |
ವೃತ್ತಿಯ ಪಡೆದಿ ನೀ ಹನಸೀ ಗ್ರಾಮದಲಿ ||೨|| ಜಯ

ಪರ್ವತದ ಶಿಲೆಯನ್ನು ದ್ರವಿಸಿದಿ ಕ್ಷಣದಿ |
ಸರ್ವಪಾನವಾದ ಭಸ್ಮವ ಗೈದಿ ||
ಗರ್ವಿಷ್ಟ ಗೋಣಿಗೆ ಲೀಲೆಯ ತೋರಿದೀ |
ಗರ್ವಹರಣಕ್ಕಾಗಿ ಗೋಡೆಯ ನಡೆಸಿದಿ ||೩|| ಜಯ

ತುಂಗಭದ್ರೆಯ ಧಡದ ಕ್ಷೇತ್ರಗಳಲ್ಲಿ
ತಂಗಿ ಪಾವನಗೊಳಿಸಿದಿ ಮುನಿಯೇ
ರಂಗಾಪುರದಲಿ ಮಹಲಿಂಗವ ಪಡೆದೀ
ಅಂಗೈಯಲಿ ಪೂಜಿಸಿ ಸಿದ್ಧಿಯ ಪಡೆದೀ ||೪|| ಜಯ

ತಿಂತ್ರಿಣಿ ವೃಕ್ಷದಿ ಕ್ಷೀರವ ಶ್ರವಸಿ |
ಸಂತುಷ್ಟಗೊಳಿಸಿದಿ ದ್ವಿಜರನು ಕ್ಷಣದಿ ||
ಅಂತಸ್ತು ಹನ್ನೊಂದರ ಗೋಪುರವನೇರಿಸಿ ||
ಹೊಂದಿದಿ ಖ್ಯಾತಿಯ ತ್ರಿಲೋಕದಲ್ಲಿ ||೫|| ಜಯ

---

# ಮಹಾಪುರುಷ ಮನೆತನದ ವಂಶಾವಳಿ



ಶ್ರೀ ಅಪ್ಪಯ್ಯಬಿಷ್ಟರು



ಬಿಷ್ಟಪ್ಪಯ್ಯ



ಶಿವಪ್ಪಯ್ಯ

ಮಹದೇವಪ್ಪಯ್ಯ



ಬಿಷ್ಟಪ್ಪಯ್ಯ



ಶಿವಪ್ಪಯ್ಯ



ಮಹದೇವಪ್ಪಯ್ಯ



ಬಿಷ್ಟಪ್ಪಯ್ಯ



ಶಿವಪ್ಪಯ್ಯ

(ಮುಂದಿನ ಪುಟ ನೋಡಿರಿ)

(ಹಿಂದಿನ ಪುಟದಿಂದ ಬಂದದ್ದು)

